

# ಮಹಾಮನೆ

ಕನ್ನಡ ಮಾಸಿಕ ಪತ್ರಿಕೆ

ಸಂಪುಟ ೨೪ ಸಂಚಿಕೆ ೦೭ ರೂ. ೧೫/- ಫೆಬ್ರವರಿ - ೨೦೨೨

ಪ್ರಕಾಶಕರು

**ಗೊ.ರು. ಚನ್ನಬಸಪ್ಪ**

ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಮೈಸೂರು

## ಕ್ಷೇತ್ರ ವಾರ್ತೆಗಳು



ದಾವಣಗೆರೆ ಜಿಲ್ಲಾ ಕದಳಿ ಮಹಿಳಾ ವೇದಿಕೆಯ ೧೩ನೇ ವಾರ್ಷಿಕೋತ್ಸವ ಮತ್ತು
ಶರಣೆ ಸಾವಿತ್ರಮ್ಮ ರೊ॥ ಪ್ರೊ॥ ಬಿ.ಕೆ. ಸಿದ್ದಪ್ಪ ಬಾಡ ಶರಣ ದತ್ತಿ, ದಿನಾಂಕ:೪.೧.೨೦೨೨
ಚಿತ್ರದಲ್ಲಿ: ಅನಸೂಯಾದೇವಿ ಟಿ.ಎಸ್. ಪಾಟೀಲ್ ಅವರಿಗೆ ಜಿಲ್ಲಾ ಕದಳಿಶ್ರೀ ಪುರಸ್ಕಾರ ನೀಡಿ ಗೌರವಿಸಲಾಯಿತು. ಸಾವಿತ್ರಮ್ಮ ಸಿದ್ದಪ್ಪ, ಮಾತಾ ಯೋಗಾನಂದಮಯಿ, ಈಶ್ವರನ್ ತೀರ್ಥ, ಕೆ.ಬಿ.ಪರಮೇಶ್ವರಪ್ಪ, ಶಂಶಾದ್ ಬೇಗಂ, ಆಶಾ ಎಂ. ಪಾಟೀಲ್, ವಿನೋದ ಅಜಗಣ್ಣನವರ್, ಕುಸುಮ ಲೋಕೇಶ್



ಮುದ್ದೇಬಿಹಾಳ: ಲಿಂ. ಮಾತೋಶ್ರೀ ಯಮುನಾಬಾಯಿ ಕಲಕೇರಿ, ಲಿಂ. ಶ್ರೀ ಹಣಮಂತ್ರಾಯ ಕಲಕೇರಿ ಮತ್ತು ಲಿಂ. ಮಾತೋಶ್ರೀ ಗಿರಿಜಾ ಕಲಕೇರಿ ದತ್ತಿ ಉಪನ್ಯಾಸ ದಿನಾಂಕ. ೪.೦೧.೨೦೨೨. ದತ್ತಿ ದಾನಿಗಳು: ಎಚ್.ಆರ್. ಕಲಕೇರಿ, ಡಾ.ಸಂಗಮೇಶ ಕಲಹಾಳ, ಶಿವಾನಂದ ಕಲಕೇರಿ, ಚಿತ್ರದಲ್ಲಿ: ಬಾಪುಗೌಡ ಪಾಟೀಲ, ಬಾಪುಗೌಡ ಬಿರಾದಾರ್, ಮಡಿವಾಳಪ್ಪ ಬಿರಾದಾರ್, ದಂಡಪ್ಪಗೌಡ ಪಾಟೀಲ, ಎಂ.ವ್ಹಿ.ಮಾಟಲದಿನ್ನಿ, ಬಸವರಾಜ ನಾಲತವಾಡ, ವ್ಹಿ.ಎಮ್. ಪಟ್ಟಣಶೆಟ್ಟಿ, ಎಸ್.ಎಸ್.ಪಾಟೀಲ, ಎಂ.ಜಿ. ಬಿರಾದಾರ, ವೆಂಕನಗೌಡರು ಕೌನ್ನೂರ, ಎಸ್.ಬಿ. ಬಂಗಾರಿ



ಶ್ರೀ ವಿಜಯ ಮಹಾಂತೇಶ್ವರ ಸಂಸ್ಥಾನ ಮಠ, ಇಲಕಲ್ಲ, ಜಿಲ್ಲಾ ಬಾಗಲಕೋಟೆಯಲ್ಲಿ ನಡೆದ ಕೆ.ಆರ್. ಲಿಂಗಪ್ಪ ಜಾನಪದ ಪ್ರಶಸ್ತಿ ಪ್ರದಾನ ಸಮಾರಂಭ – ೪.೧೨.೨೦೨೧ ಸಾನ್ನಿಧ್ಯ: ಪೂಜ್ಯ ಶ್ರೀ ಮ.ನಿ.ಪ್ರ. ಗುರುಮಹಾಂತ ಮಹಾಸ್ವಾಮಿಗಳು ಡಾ. ಶ್ರೀ ಚೆನ್ನಬಸವದೇವರು ನಂದವಾಡಗಿ, ಪ್ರಶಸ್ತಿ ಪುರಸ್ಕೃತರು: ತಿಮ್ಮಪ್ಪ ಧರಣಪ್ಪ ಮತ್ತು ಶರಣಪ್ಪ ಗೋನಾಳ
ಚಿತ್ರದಲ್ಲಿ: ವೀರಣ್ಣ ಬೆಳವಣಕಿ, ಎಸ್.ಬಿ. ಅಂಗಡಿ, ಪ್ರೊ. ಎಸ್.ಎನ್. ಹಾದಿಮನಿ, ಬಸವರಾಜ ನೆಲ್ಲಿಸರ ಡಾ. ಗೊ.ರು. ಚನ್ನಬಸಪ್ಪ, ಸುನಿತಾ ಅಂಗಡಿ, ಸುಜಾತಾ ಅಂಗಡಿ, ಎ.ಎಸ್. ಪಾವಟೆ, ಕೊಂಡಜ್ಜಿ ಬ. ಷಣ್ಮುಖಪ್ಪ ಎಸ್.ಎಂ. ಹಂಪಯ್ಯ, ಡಾ. ಸಂತೋಷ ಪೂಜಾರಿ, ಮಹಾಬಳೇಶ ಮರಟದ.

# ಮಹಾಮನೆ

ಸಂಪುಟ ೨೪ : ಸಂಚಿಕೆ ೦೭ ಫೆಬ್ರವರಿ – ೨೦೨೨

ಸಂಪಾದಕರು
**ಡಾ. ಎಂ.ಎಸ್. ಆಶಾದೇವಿ**



ಪ್ರಕಾಶಕರು
**ಗೊ.ರು. ಚನ್ನಬಸಪ್ಪ**
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು
ಮೈಸೂರು





**ಆಡಳಿತ ಕಾರ್ಯಾಲಯ**
ಜಗದ್ಗುರು ಶ್ರೀ ಶಿವರಾತ್ರೀಶ್ವರ ವೃತ್ತ, ೧ನೆಯ ಮುಖ್ಯರಸ್ತೆ, ಜಯನಗರ ೮ನೆಯ ವಿಭಾಗ
ಬೆಂಗಳೂರು - ೫೬೦ ೦೭೦, ದೂ: ೦೮೦ - ೨೨೯೭ ೦೧೨೫
E-mail: mahamanemagazine@gmail.com



**ಸಂಚಿಕೆಯ ಅಂತರಂಗ**

ಬಿನ್ನಹ ...... 

## ಮನಕ್ಕೆ ಮನೋಹರವಾಗುವ ವೃತ್ತಿ

ನೇಯ್ಗೆ ಎನ್ನುವುದು ಒಂದು ವೃತ್ತಿಯೂ ಹೌದು; ತಾತ್ವಿಕ ಪರಿಕಲ್ಪನೆಯೂ ಹೌದು; ನೇಯ್ಗೆಯನ್ನು ಬದುಕಿನ ವಿನ್ಯಾಸಕ್ಕೂ ಶಕ್ತವಾಗಿ ಹೋಲಿಸಬಹುದಾಗಿದೆ. ಈ ತಿಂಗಳು ದಾಸಿಮಯ್ಯನವರ ಜಯಂತಿಯೂ ಹೌದು. ದಾಸಿಮಯ್ಯನವರ ಕಥೆ ಜನಜನಿತವಾಗಿದೆ. ಅದನ್ನು ಪುನರಾವರ್ತಿಸುವ ಅಗತ್ಯವಿಲ್ಲ. ಆದರೆ ದಾಸಿಮಯ್ಯನ ಬದುಕು ಮತ್ತು ವ್ಯಕ್ತಿತ್ವಗಳು ನಿತ್ಯನೂತನವೆನ್ನುವಂತೆ ಲೋಕದ ಎದುರಿಗೆ ಸದಾ ಇದ್ದೇ ಇರುತ್ತದೆ. ಕಾಯಕವೇ ಕೈಲಾಸವೆನ್ನುವ ಶರಣರ ಪರಿಕಲ್ಪನೆಗೆ ಅದ್ಭುತ ರೂಪಕ ದಾಸಿಮಯ್ಯ. ನಾಗರೀಕತೆಯ ಭೀಕರ ಕಾಯಿಲೆಗಳಲ್ಲೊಂದು ಕಾಯಕದ ತರತಮ. ವೃತ್ತಿಘನತೆಯ ಬಗೆಗೆ ಮತ್ತು ವೃತ್ತಿಯಲ್ಲಿನ ತಾದಾತ್ಮ್ಯ ಮತ್ತು ಅನುರಕ್ತಿಗಳೇ ಬದುಕಿನ ಸಾರ್ಥಕ ದಾರಿ ಎನ್ನುವುದನ್ನು ಹೇಳುವುದೂ ಎಲ್ಲೋ ಕೆಲವು ಸಂದರ್ಭಗಳಲ್ಲಿ ಮಾತ್ರ. ಬಹುತೇಕ ಸಂದರ್ಭಗಳಲ್ಲಿ ವೃತ್ತಿಯನ್ನು ಆಧರಿಸಿಯೇ ವೇತನ, ಗೌರವ, ಎಲ್ಲವೂ ನಿರ್ಧಾರವಾಗುತ್ತದೆ. ಯೂರೋಪಿನ ಎಲ್ಲೋ ಕೆಲವು ರಾಷ್ಟ್ರಗಳು ಮಾತ್ರ ಈ ಕಾಯಿಲೆಯಿಂದ ಮುಕ್ತಿಯನ್ನು ಪಡೆದಿವೆ. ಮಿಕ್ಕಂತೆ ವರ್ಗವ್ಯವಸ್ಥೆಯನ್ನು ಲೋಕದಲ್ಲಿ ಸ್ಥಾಪಿಸಿರುವ ಶಕ್ತಿಗಳಲ್ಲಿ ಕಾಯಕವೂ ಒಂದೆನ್ನುವುದು ವಿಷಾದನೀಯ ಸತ್ಯ. ಒಟ್ಟೂ ಶರಣ ಚಳುವಳಿಯೇ ಕಾಯಕ–ಗೌರವದ ಮೂಲಕವೇ ವ್ಯಕ್ತಿ ಗೌರವವನ್ನು ಎತ್ತಿಹಿಡಿದದ್ದು ಅದರ ನಿರ್ಣಾಯಕ ಸಾಧನೆಗಳಲ್ಲಿ ಒಂದು.

ದಾಸಿಮಯ್ಯ ಇದನ್ನು ತಾತ್ವಿಕವಾಗಿ, ಬಿಗಿಹುಪ್ಪಿನಿಂದ ಮಾಡಿದವರಂತೆ ಕಾಣದೆ, ಕಾಯಕದ ಶಕ್ತಿ ಮತ್ತು ಸೌಂದರ್ಯ ಎರಡನ್ನೂ ಎತ್ತಿ ಹಿಡಿದವರಂತೆ ಕಾಣಿಸುತ್ತಾರೆ. ದೇವಲಯದ ಜಾಗದಲ್ಲಿ ಆತ ತನ್ನ ಮಗ್ಗವನ್ನು ಪ್ರತಿಷ್ಠಾಪಿಸಿದ್ದು, ಶರಣ ಚಳುವಳಿಯ ಪ್ರಾಯೋಗಿಕ ಗೆಲುವಿನಂತೆ ಕಾಣಿಸುತ್ತದೆ. ನಾವು ಗಮನಿಸಬೇಕಾದ ಇನ್ನೊಂದು ಮುಖ್ಯವಾದ ಸಂಗತಿಯೆಂದರೆ ತನ್ನ ಕಾಯಕದಲ್ಲಿ ದಾಸಿಮಯ್ಯ ಕಂಡುಕೊಂಡ ಸೌಂದರ್ಯ ಮತ್ತು ಆನಂದ ನೇಯ್ಗೆಯಲ್ಲಿಯೇ ದೈವಾನುಸಂಧಾನದ ಚರಮಸುಖವನ್ನು ದಾಸಿಮಯ್ಯ ಪಡೆದದ್ದು ನಮಗೆ ಮುಖ್ಯವಾಗಬೇಕು. ಸಾಮಾಜಿಕ ಪ್ರತಿಷ್ಠೆ ಮತ್ತು ಹಣದ ಸಲುವಾಗಿ ಮನಕ್ಕೆ ಮನೋಹರವಾಗದ ವೃತ್ತಿಯನ್ನು ಆರಿಸಿಕೊಳ್ಳುವ ಆತ್ಮವಂಚನೆ ಮತ್ತು ಸಾಮಾಜಿಕ ವಂಚನೆಯು ಈ ನಮ್ಮ ಕಾಲಘಟ್ಟದಲ್ಲಿ ಅದೊಂದು ನೈತಿಕ ವಂಚನೆಯಾಗಿಯೂ ಕಾಣಿಸುತ್ತದೆ. ಆದ್ದರಿಂದಲೇ ನಮ್ಮ ಮನಸ್ಸು ಮತ್ತು ಆತ್ಮಗಳು ಒಪ್ಪುವ ವೃತ್ತಿಯನ್ನು ಆರಿಸಿಕೊಳ್ಳುವುದರ ರೂಪಕವಾಗಿ ದಾಸಿಮಯ್ಯನವರ ಬದುಕು ಕಾಣಿಸುತ್ತದೆ.

ಈ ಸಂಚಿಕೆಯಲ್ಲಿ ಕನ್ನಡದ ಹಲವು ಲೇಖಕರು ಶರಣ ಚಳವಳಿ ಮತ್ತು ಪರಂಪರೆಯ ಬಗ್ಗೆ ಲೇಖನಗಳನ್ನು ನೀಡಿ ತಮ್ಮ ವಿಚಾರಗಳನ್ನು ಓದುಗರೊಂದಿಗೆ ಹಂಚಿಕೊಂಡಿದ್ದಾರೆ. ಇವರೆಲ್ಲರಿಗೆ ಹಾಗೂ ಎಂದಿನಂತೆ ಪೂರ್ಣ ಸಹಕಾರವನ್ನು ನೀಡಿರುವ ಕಾರ್ಯಾಲಯದ ಸಿಬ್ಬಂದಿಯವರಿಗೆ ಮತ್ತು ಮುಖಪುಟದ ಕಲಾವಿದ ಶ್ರೀ ನಟರಾಜ ಎಸ್.ಎಲ್. ಅವರಿಗೆ ಸಂಪಾದಕ ಮಂಡಳಿಯ ಪರವಾಗಿ ಹೃತ್ಪೂರ್ವಕ ಕೃತಜ್ಞತೆಗಳು.

**ಡಾ.ಎಂ.ಎಸ್. ಆಶಾದೇವಿ**





**ಗೊರುಚ – ಉವಾಚ**

## ನೀನು ಮಾತ್ರ ನೀನೇ ಆಗಿರು

**ಡಾ. ಗೊ.ರು. ಚನ್ನಬಸಪ್ಪ**

ಹಿಂದೆ ಯಾವ ಯಾವುದೋ ಸಂದರ್ಭದಲ್ಲಿ ಸಿದ್ಧಪಡಿಸಿಟ್ಟಿದ್ದ ಟಿಪ್ಪಣಿಗಳನ್ನು ಮತ್ತಾವುದೋ ಅಗತ್ಯಕ್ಕಾಗಿ ಹುಡುಕುತ್ತಿರುವಾಗ, ಆಕಸ್ಮಿಕವಾಗಿ ಒಂದು ಸಣ್ಣ ಚೀಟಿ ಸಿಕ್ಕಿತು. ಅದರಲ್ಲಿ ಒಂದು ಕವನವಿತ್ತು. ಸ್ವಾರಸ್ಯವೂ, ಅರ್ಥಪೂರ್ಣವೂ ಆಗಿದ್ದ ಆ ಕವನದ ಕೊನೆಯ ಸಾಲೇ ಈ ಚಿಂತನದ ಶೀರ್ಷಿಕೆ. ಅದನ್ನು ನಾನು ಎಲ್ಲೋ ನೋಡಿ ಗುರುತು ಹಾಕಿಟ್ಟಿರಬೇಕು. ಆದರೆ, ಆಗಿರುವ ನನ್ನ ತಪ್ಪೆಂದರೆ, ಆ ಕವಿಯ ಹೆಸರನ್ನು ಬರೆದಿಡದಿರುವುದು. ಈಗಲಂತೂ ಅದು ನೆನಪಾಗುತ್ತಿಲ್ಲ. ಅದನ್ನು ಇಲ್ಲಿ ಉಲ್ಲೇಖಿಸುತ್ತಿರುವಾಗ ಒಂದು ರೀತಿಯ ಅಪರಾಧಪ್ರಜ್ಞೆ ಕಾಡುತ್ತಿದೆ. ಹಾಗಾಗಿ, ಆ ಕವಿಯ ಕ್ಷಮೆ ಕೋರುತ್ತೇನೆ.

ಆ ಕವನ ಹೀಗಿದೆ:

ಎನ್ನ ಹೆತ್ತವರು, ಎನಗೆ ಅಕ್ಷರವಿತ್ತರು
ಎಲ್ಲರೂ ಹೇಳಿದ ಮಾತು:
ನೀನು ಬುದ್ಧನಾಗಬೇಕು.
ನೀನು ಮಹಾವೀರನಾಗಬೇಕು.
ನೀನು ಏಸುಕ್ರಿಸ್ತನಾಗಬೇಕು.
ಆದರೆನ್ನ ಮನ ಕೇಳಿತು:
ಬುದ್ಧನಾಗಿ ಭಿಕ್ಷೆ ಬೇಡುವೆಯಾ?
ಮಹಾವೀರನಾಗಿ ಬೆತ್ತಲೆಯಾಗುವೆಯಾ?
ಏಸುಕ್ರಿಸ್ತನಾಗಿ ಶಿಲುಬೆಗೇರುವಿಯಾ?
ಅಯ್ಯೋ ಹುಚ್ಚಾ, ಯಾರು ಏನಾದರೂ ಹೇಳಲಿ;
ಅದು ಒತ್ತಟ್ಟಿಗಿರಲಿ,
ನೀನು ಮಾತ್ರ ನೀನೇ ಆಗಿರು!

ಇಲ್ಲಿ ನಾವು ಬುದ್ಧ, ಮಹಾವೀರ, ಏಸುಕ್ರಿಸ್ತ ಅವರಂತಾಗಬಾರದೆಂಬುದು ಕವಿಯ ಅರ್ಥವಲ್ಲ; ಹಿರಿಯರ ಮಾತುಗಳಿಗೆ ನಮ್ಮ ಮನಸ್ಸು ಹೇಗೆ ಪ್ರತಿಕ್ರಿಯಿಸುತ್ತದೆ ಎಂಬುದು. ನಾವು ಆ ಮಹಾಪುರುಷರೇ ಆಗಲು ಸಾಧ್ಯವಿಲ್ಲವಾದರೂ, ಅವರ ಆದರ್ಶವನ್ನು

೪೦೬, 'ಪ್ರಣಾಮ' ೩ನೇ ಕ್ರಾಸ್,' ಎಫ್ ರಸ್ತೆ, ಐಡಿಯಲ್ ಹೋಮ್ಸ್ ಟೌನ್‌ಷಿಪ್, ೨ನೇ ಹಂತ ರಾಜರಾಜೇಶ್ವರಿ ನಗರ,
ಬೆಂಗಳೂರು-೫೬೦ ೦೯೮ ಮೊ : ೯೯೮೦೫೧೨೩೮೯

ಪಾಲಿಸಲಂತೂ ಸಾಧ್ಯವಿದೆ.

ನಮಗೆ ಒಂದು ಮಿದುಳಿದೆ. ಅದು ನಮ್ಮ ದೇಹದ ಒಂದು ಅಂಗ. ಅದನ್ನು ಕಣ್ಣಿಂದ ನೋಡಲು ಸಾಧ್ಯವಿದೆ. ಈ ಮಿದುಳಿನಲ್ಲಿ ಕಣ್ಣಿಗೆ ಕಾಣದ ಮೂರು ಚೇತನಗಳಿವೆ. ಅವೆಂದರೆ ಬುದ್ಧಿ, ಮನಸ್ಸು ಮತ್ತು ಪ್ರಜ್ಞೆ. ಸಾತ್ವಿಕವೆನಿಸಿರುವ ಬುದ್ಧಿ ಪ್ರಜ್ಞೆಯನ್ನು ಜಾಗೃತಗೊಳಿಸಬೇಕು. ಇಲ್ಲದಿದ್ದರೆ, ಮನಸ್ಸಿನದೇ ಮೇಲುಗೈಯಾಗುತ್ತದೆ. ಹಾಗೆ ಮೇಲುಗೈಯಾದ ಮನಸ್ಸೇ ಸಲ್ಲದ ಸಂಶಯ ಅಥವಾ ಹೆದರಿಕೆ ಹುಟ್ಟಿಸುತ್ತದೆ. ಇಲ್ಲವೇ ನಮ್ಮಿಂದ ಸಲ್ಲದ ಕೆಲಸ ನಡೆಯುವಂತೆ ಮಾಡುತ್ತದೆ.

ನಮ್ಮ ಒಳಗಿನ ಮನಸ್ಸಿನ ಬೆದರಿಕೆಯ ಪ್ರಶ್ನೆಗಳಿಗೆ ಹೊರಗಿನ ಜನರೂ ದನಿಗೂಡಿಸಿ, "ಭಿಕ್ಷೆ ಬೇಡಲು ಬುದ್ಧನಂತಹ ದೃಢನಿಲುವು ನಿನಗೆ ಇದೆಯೆ? ಬೆತ್ತಲೆಯಾಗಲು ಮಹಾವೀರನಂತಹ ವೈರಾಗ್ಯ ನಿನಗೆ ಸಾಧ್ಯವೆ? ಶಿಲುಬೆಗೇರಲು ಏಸುಕ್ರಿಸ್ತನಂತಹ ಸತ್ಯಸಂಧತೆ ನಿನ್ನಲ್ಲಿ ಇದೆಯೆ?" ಎಂದು ಕೇಳಿ ಗೊಂದಲವುಂಟುಮಾಡಬಹುದು.

ನಿಜ. ಭಿಕ್ಷೆ ಬೇಡಿದವರೆಲ್ಲ ಬುದ್ಧರಾಗುವುದಿಲ್ಲ. ಬೆತ್ತಲೆಯಾದವರೆಲ್ಲ ಮಹಾವೀರರಾಗುವುದಿಲ್ಲ; ಸತ್ಯಸಂಧರೆಂದವರೆಲ್ಲ ಏಸುಕ್ರಿಸ್ತರಾಗುವುದಿಲ್ಲ. ನಮ್ಮ ಕಾಲದ ಘಟನೆಯನ್ನೇ ಹೇಳುವುದಾದರೆ, ಗುಂಡಿಗೆ ಬಲಿಯಾದವರೆಲ್ಲ ಗಾಂಧಿಯಾಗುವುದಿಲ್ಲ.

ಇದನ್ನು ವಿಚಾರ ಮಾಡಿಯೇ ಕವಿ, "ನೀನೇನೂ ಬುದ್ಧ, ಮಹಾವೀರ, ಏಸುಕ್ರಿಸ್ತರಾಗುವುದು ಬೇಡ. ಹಾಗೆ ಅವರೇ ಆಗುವುದು ಸಾಧ್ಯವೂ ಇಲ್ಲ. ಸೃಷ್ಟಿಯೇ ನಮ್ಮನ್ನು ಭಿನ್ನಭಿನ್ನವಾಗಿ ಸೃಷ್ಟಿಸಿದೆ. ಒಬ್ಬರು ಇನ್ನೊಬ್ಬರಾಗಲು ಸಾಧ್ಯವಿಲ್ಲ. ಮೇಲಾಗಿ ಆ ಮಹಾಪುರುಷರಾರೂ "ನಮ್ಮಂತೆ ಆಗಿ" ಎಂದು ಎಲ್ಲೂ ಹೇಳಿಲ್ಲ. ಆದ್ದರಿಂದ ಯಾರು ಏನಾದರೂ ಹೇಳಲಿ. ನೀನು ಅವರೇ ಆಗುವ ಹುಚ್ಚು ಹಚ್ಚಿಕೊಳ್ಳಬೇಡ. ಅವರ ನಡೆ-ನುಡಿಗಳನ್ನು ಪಾಲಿಸಲು "ನೀನು ಮಾತ್ರ ನೀನೇ ಆಗಿರು" ಎಂಬ ಅರ್ಥದಲ್ಲಿ ಹೇಳಿರುವಂತೆ ಕಾಣುತ್ತದೆ.

ನಮ್ಮನ್ನು ಹೆತ್ತವರು, ನಮಗೆ ಕಲಿಸಿದವರು ಬುದ್ಧನಾಗಬೇಕು, ಮಹಾವೀರನಾಗಬೇಕು, ಏಸುಕ್ರಿಸ್ತನಾಗಬೇಕು, ಎನ್ನುವುದು ಅವರಂತೆ ಲೋಕಕ್ಕೆ ಬೇಕಾದವರಾಗಬೇಕು ಎಂಬ ಅರ್ಥದಲ್ಲಿ. ಹಾಗಿರಲು ನಾವು ಮಾತ್ರ ನಾವೇ ಆಗಿರಬೇಕು ಎಂದರೆ ನಾವು ಪ್ರಜ್ಞಾವಂತರಾಗಬೇಕು.

"ನಾನು ಶ್ರೀಮಂತನಾಗಬೇಕು, ಅಧಿಕಾರಿಯಾಗಬೇಕು, ಶಾಸಕನಾಗಬೇಕು, ಮಂತ್ರಿಯಾಗಬೇಕು, ಪ್ರಧಾನಿಯಾಗಬೇಕು" – ಹೀಗೆ ನೂರೆಂಟು ಆಸೆಗಳನ್ನಿಟ್ಟುಕೊಂಡು ಅವುಗಳನ್ನು ಸಾಧಿಸಲು ಏನೇನೋ ಹುನ್ನಾರಗಳನ್ನು ನಡೆಸುವವರನ್ನು ಕವಿ 'ಹುಚ್ಚು' ಎಂದು ಕರೆದು ಎಚ್ಚರಿಸಿದ್ದಾನೆ.

□





# ಶರಣ ಸಾಹಿತ್ಯ ಕ್ಷೇತ್ರಕ್ಕೆ ಅಮೂಲ್ಯ ಕೊಡುಗೆ ನೀಡಿದ ಶ್ರೇಷ್ಠ ವಿದ್ವಾಂಸ ಡಾ. ಹೆಚ್. ತಿಪ್ಪೇರುದ್ರಸ್ವಾಮಿ

**ಎಚ್.ಎಸ್. ಸಿದ್ಧಗಂಗಪ್ಪ**

**ಶಿ**ವಮೊಗ್ಗ ಜಿಲ್ಲೆ ಶ್ರೇಷ್ಠ ಕವಿಗಳಿಗೆ, ವಿದ್ವಾಂಸರಿಗೆ ದಾರ್ಶನಿಕರಿಗೆ, ರಾಜಕೀಯ ಮುತ್ಸದ್ದಿಗಳಿಗೆ, ಸಮಾಜವಾದಿಗಳಿಗೆ, ಚಿಂತಕರಿಗೆ ಜನ್ಮ ನೀಡಿದ ಪುಣ್ಯಭೂಮಿ. ಅಂತಹ ಪುಣ್ಯಭೂಮಿಯಲ್ಲಿ ಜನಿಸಿ ಶರಣ ಸಾಹಿತ್ಯವೂ ಸೇರಿದಂತೆ ಅನೇಕ ಪ್ರಕಾರಗಳಲ್ಲಿ ಮೌಲಿಕ ಕೃತಿಗಳನ್ನು ನೀಡಿ ಘನತೆಯನ್ನು ತಂದುಕೊಟ್ಟವರು ಶ್ರೇಷ್ಠ ವಿದ್ವಾಂಸರಾದ ಡಾ. ಹೆಚ್. ತಿಪ್ಪೇರುದ್ರಸ್ವಾಮಿಯವರು ಎಂದು ಹೇಳುವಾಗ ಮನಸ್ಸು ಪುಳುಕಿತವಾಗುತ್ತದೆ.

ಸರಳತೆ, ಸಜ್ಜನಿಕೆ, ಮುಗ್ಧತೆಯಿಂದ ಕೂಡಿದ ಮಗುವಿನ ನಗು, ನಿಷ್ಕಲ್ಮಶವಾದ ಹೃದಯ ವೈಶ್ಯಾಲತೆ, ಎಲ್ಲರನ್ನು ಪ್ರೀತಿಸುವ, ಎಲ್ಲರಲ್ಲಿಯೂ ಒಳಿತನ್ನೇ ಕಾಣುವ ದಾರ್ಶನಿಕ ದೃಷ್ಟಿ, ವಿನಯವಂತಿಕೆ, ಅವರಲ್ಲಿದ್ದ ಅದ್ವಿತೀಯ ಪಾಂಡಿತ್ಯಕ್ಕೆ ಮೆರಗು ನೀಡುತ್ತಿದ್ದವು. ಅವರದು ತಲಸ್ಪರ್ಶಿ ಅಧ್ಯಯನ, ಸೂಕ್ಷ್ಮ ಸಂವೇದನಾಶೀಲತೆಯಿಂದ, ಇಂದಿನ ಯುವ ವಿದ್ವಾಂಸರಿಗೆ ಮಾರ್ಗದರ್ಶಕರಾಗಿದ್ದರು. ಯಾವುದೇ ವಿಷಯವನ್ನು ತೆಗೆದುಕೊಂಡು ಬರೆಯುವಾಗ ವೈಜ್ಞಾನಿಕ ವಿಶ್ಲೇಷಣೆ, ವಸ್ತುನಿಷ್ಠತೆ ಹಾಗೂ ನಿಖರತೆ ಇದ್ದುದರಿಂದ ಅವರ ಲೇಖನಿಯಿಂದ ಮೂಡಿಬಂದ ಲೇಖನಗಳು, ಕೃತಿಗಳು ಮೌಲ್ಯದಿಂದ ಕೂಡಿವೆ.

ಕಾದಂಬರಿ, ನಾಟಕ, ಸಣ್ಣಕಥೆ, ಕಾವ್ಯ ಮಕ್ಕಳ ಸಾಹಿತ್ಯ ಜೀವನಚರಿತ್ರೆ ಗ್ರಂಥ ಸಂಪಾದನೆ, ಸಂಪಾದಿತ ಉದ್ಗ್ರಂಥಗಳು, ಬಾನುಲಿ ಚಿಂತನ ಭಾಷಣ, ವಿಮರ್ಶೆ, ಇಂಗ್ಲೀಷ್ ಕೃತಿಗಳು, ಇಂಗ್ಲೀಷಿಗೆ ಅನುವಾದವಾಗಿರುವ ಕೃತಿಗಳೂ ಸೇರಿದಂತೆ ನೂರಕ್ಕೂ ಹೆಚ್ಚು ಕೃತಿಗಳನ್ನು ನೀಡಿ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತಗೊಳಿಸಿದ್ದಾರೆ.

ನಾನು ಶಿವಮೊಗ್ಗದಲ್ಲಿ ಸರ್ಕಾರಿ ಸೇವೆಯಲ್ಲಿದ್ದ ಸಂದರ್ಭದಲ್ಲಿ ಡಾ. ತಿಪ್ಪೇರುದ್ರಸ್ವಾಮಿಯವರು ಬಿ.ಆರ್. ಪ್ರಾಜೆಕ್ಟ್‌ನ ಸ್ನಾತಕೋತ್ತರ ಕೇಂದ್ರದ ನಿರ್ದೇಶಕರಾಗಿದ್ದರು.

ಅನೇಕ ಸಂದರ್ಭಗಳಲ್ಲಿ ಅವರನ್ನು ಭೇಟಿ ಮಾಡುವ ಸುಯೋಗ ನನಗೆ ದೊರಕಿತ್ತು. ಅವರು ನಾಡು ಕಂಡ ಪ್ರಸಿದ್ಧ ವಿದ್ವಾಂಸರಾಗಿದ್ದರೂ ಅವರಲ್ಲಿ ಸರಳತೆ, ಸೌಜನ್ಯ ಮನೆ ಮಾಡಿಕೊಂಡಿರುವುದನ್ನು ಕಂಡು ವಿಸ್ಮಿತನಾಗಿದ್ದೆ. ಅಹಂ ಅನ್ನವುದು ಅವರ ಹತ್ತಿರ ಸುಳಿಯಲು ಭಯಪಡುತ್ತಿತ್ತು. ತಮ್ಮ ಕೊನೆಯುಸಿರುವವರೆಗೂ ತಾವು ನಂಬಿದ ಮೌಲ್ಯಗಳನ್ನು, ಆದರ್ಶವನ್ನು

ನಂ. ೧೬೧೭, 'ಮಾತೃಶ್ರೀ', ಸರ್.ಎಂ. ವಿಶ್ವೇಶ್ವರಯ್ಯ ಮುಂದುವರಿದ ಬಡಾವಣೆ, ೮ನೆ ಬ್ಲಾಕ್, ವಿಶ್ವನೀಡಂ ಅಂಚೆ, ಸ್ಫೂರ್ತಿಧಾಮದ ಎದುರು, ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು – ೫೬೦ ೦೯೧ ೯೮೪೫೫ ೬೫೮೭೧

ಜತನದಿಂದ ಕಾಪಾಡಿಕೊಂಡು ಬಂದ ಸಜ್ಜನರು. ನಾನು ಅವರನ್ನು ಭೇಟಿಯಾದಾಗಲೆಲ್ಲ ಪ್ರೀತಿಯಿಂದ, ಆತ್ಮೀಯತೆಯಿಂದ ಮಾತನಾಡುತ್ತಿದ್ದರು. ನಾವೊಮ್ಮೆ ಅವರನ್ನು ನೇರವಾಗಿ ಕೇಳಿದೆ. ಸಾರ್, ನೀವು ಇಷ್ಟು ದೊಡ್ಡ ವಿದ್ವಾಂಸರಾಗಿದ್ದರೂ, ಅಧಿಕಾರದಲ್ಲಿದ್ದರೂ, ಈ ಸರಳತೆ ನಿಮಗೆ ಹೇಗೆ ಸಾಧ್ಯವಾಯಿತು ಎಂದು. ಆಗ ಅವರು ನಸುನಕ್ಕು ಹೇಳಿದರು. 'ಸರಳತೆ ಹೃದಯದಿಂದ ಮೂಡಿಬರಬೇಕು ಮತ್ತು ಶ್ರದ್ಧೆ ಇಲ್ಲದೆ ಇದ್ದರೆ ಮಹತ್ವವನ್ನು ಸಾಧಿಸುವುದು ಮರೀಚಿಕೆಯಾಗುತ್ತದೆ'. ಅವರ ಮಾತನ್ನು ಕೇಳಿ ನನಗೆ ದೊಡ್ಡವರಲ್ಲಿ ದೊಡ್ಡತನವೇ ಕಾಣಿಸಿತು. 'ತುಂಬಿದ ಕೊಡ ತುಳುಕುವುದಿಲ್ಲ' ಎಂಬ ಗಾದೆ ಇಂಥವರನ್ನು ಕಂಡೇ ಸೃಷ್ಟಿಯಾಗಿರಬೇಕು ಎಂದುಕೊಂಡೆ. ಯಾರಾದರು ಸರಳತೆ, ಹೃದಯವಂತಿಕೆ, ನಿರಾಂಡಬರತೆ ಎಂದರೇನು ಎಂದು ಪ್ರಶ್ನೆ ಮಾಡಿದರೆ ಡಾ. ಹೆಚ್. ತಿಪ್ಪೇರುದ್ರಸ್ವಾಮಿಯವರನ್ನು ಉದಾಹರಣೆಯಾಗಿ ಕೊಡಬಹುದು.

ಸೃಜನಶೀಲತೆಯಿದ್ದುದರಿಂದ ಅವರ ಬರಹಗಳಲ್ಲಿ ಸೂಕ್ಷ್ಮವಾದ ಒಳನೋಟಗಳನ್ನು ಕಾಣಲು ಸಾಧ್ಯವಾಯಿತು. ಬದುಕಿರುವವರೆಗೂ ಉನ್ನತ ಆದರ್ಶಗಳ ಮುಂಬೆಳಕಿನಲ್ಲಿ ಬದುಕಿದರು. ಅಂತರಂಗ ಬಹಿರಂಗಗಳೆರಡಲ್ಲೂ ಏಕತಾನತೆಯನ್ನು ಕಾಪಾಡಿಕೊಂಡು ಬಂದರು. ಸಂತೋಷವಾದಾಗ ಹಿಗ್ಗದೆ, ಕಷ್ಟ ಬಂದಾಗ ಕುಗ್ಗದೆ ಸ್ಥಿತಿಪ್ರಜ್ಞತ್ವವನ್ನು ಹೊಂದಿದ್ದರು. ಅವರ ಮನಸ್ಸು ಪೂರ್ವಾಗ್ರಹ ಪೀಡಿತವಲ್ಲದ ನಿಷ್ಕಳಂಕವಾದ ಮುಗ್ಧ ಮನಸ್ಸು. ಅವರ ಯಾವುದೇ ಧರ್ಮಕ್ಕೆ ಬದ್ಧರಾದವರಲ್ಲ, ಹಾಗೆಯೇ ಯಾವುದೇ ಧರ್ಮವನ್ನು ವಿರೋಧಿಸಿದವರೂ ಅಲ್ಲ. ಶರಣರು ಬದುಕಿ ತೋರಿಸಿದ ಮಾನವ ಧರ್ಮದ ತತ್ತ್ವ ಸಿದ್ಧಾಂತಗಳನ್ನು ಜೀವನದಲ್ಲಿ ಅಳವಡಿಸಿಕೊಂಡಿದ್ದರು.

ಜನನ : ಶಿವಮೊಗ್ಗ ಜಿಲ್ಲೆಯ ಹೊನ್ನಾಳಿಯಲ್ಲಿ ಫೆಬ್ರವರಿ ೩, ೧೯೨೮ರಲ್ಲಿ ಜನಿಸಿದರು. ಹಡೆದಪುಣ್ಯ ಜೀವಿಗಳು ತಂದೆ ಚನ್ನಮಲ್ಲಯ್ಯ, ತಾಯಿ ಬಸಮ್ಮ. ಹುಟ್ಟಿದಾಗ ಇಟ್ಟ ಹೆಸರು ತೋಂಟರಾಧ್ಯ, ಆದರೆ ಮಗು ಸದಾ ಅಳುತ್ತಿದ್ದುದರಿಂದ ಮನೆದೇವರಾದ ತಿಪ್ಪೇರುದ್ರ ಮುನಿಸ್ವಾಮಿಗೆ ಮೊರೆ ಹೋದರು. ಮಗು ಅಳುವುದನ್ನು ನಿಲ್ಲಿಸಿತು. ಮುಂದೆ ಶಾಲೆಗೆ ಸೇರಿಸುವಾಗ ಹೆಚ್. ತಿಪ್ಪಯ್ಯ ಎಂದು ದಾಖಲಿಸಿದರು. ಹುಟ್ಟಿದ ಮೂರು ತಿಂಗಳಿಗೆ ಮಾತೃ ವಾತ್ಸಲ್ಯದಿಂದ ವಂಚಿತವಾದ ನತದೃಷ್ಟ ಮಗು. ಅಜ್ಜಿ ಚನ್ನಜ್ಜಿ, ಮುತ್ತಜ್ಜಿ, ಗೌರಜ್ಜಿಯವರ ಆರೈಕೆಯಲ್ಲಿ ಬೆಳೆಯಿತು. ತೊಟ್ಟಿಲಲ್ಲಿ ಮಗುವನ್ನು ಮಲಗಿಸುತ್ತಾ ಅಜ್ಜಿ, ಮುತ್ತಜ್ಜಿಯವರು ವಚನಗಳು, ತತ್ತ್ವಪದಗಳನ್ನು ಹಾಡುತ್ತಿದ್ದರು. ಶಿಶುವಾಗಿದ್ದಾಗಲೇ ದೊರೆತ ಆಧ್ಯಾತ್ಮಿಕ ಪರಿಸರ ಮುಂದೆ ಅವರು ಶರಣರನ್ನು ಕುರಿತು ಅಧ್ಯಯನ ಮಾಡಿ ಮೌಲಿಕ ಗ್ರಂಥಗಳನ್ನು ರಚಿಸಲು ಸಾಧ್ಯವಾಯಿತು.

ಶಿಕ್ಷಣ : ಪ್ರಾಥಮಿಕ ಶಿಕ್ಷಣ ಹೊನ್ನಾಳಿಯಲ್ಲಿ ಪ್ರಾರಂಭವಾಗಿ, ಬಿಳಗಿ, ಜಡೆಗೆ, ಆನವಟ್ಟಿ, ಶಿರಾಳಕೊಪ್ಪದಲ್ಲಿ ನಡೆಯಿತು. ಪ್ರೌಢಶಿಕ್ಷಣ ಶಿವಮೊಗ್ಗದ ತೀರ್ಥಹಳ್ಳಿಯಲ್ಲಿ





ನಡೆಯಿತು. ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾಗಿ ಪೋಷಕರು, ಬಂಧುಗಳು ಹೆಮ್ಮೆಪಡುವಂತೆ ಮಾಡಿದರು. ಪ್ರೌಢಶಿಕ್ಷಣ ಮುಗಿದ ಮೇಲೆ ವೈದ್ಯರಾಗಬೇಕೆಂಬ ಆಶಯದಿಂದ ಮನೆಯವರು ಎಲ್.ಎಂ.ಪಿ. ಓದಲು ಅರ್ಜಿಯನ್ನು ಹಾಕಿಸಿದರು. ಆದರೆ ತಿಪ್ಪೇರುದ್ರಸ್ವಾಮಿಯವರು ಎಂ.ಬಿ.ಬಿ.ಎಸ್. ಓದಿ ಡಾಕ್ಟರಾಗಬೇಕೆಂದು ಮನೆಯವರನ್ನು ಒಪ್ಪಿಸಿ ಶಿವಮೊಗ್ಗ ಇಂಟರ್‌ಮೀಡಿಯೇಟ್ ಕಾಲೇಜಿನಲ್ಲಿ ವಿಜ್ಞಾನ ವಿಷಯವನ್ನು ಐಚ್ಛಿಕವಾಗಿ ತೆಗೆದುಕೊಂಡು ಸೇರಿದರು.

ಆ ವೇಳೆಗಾಗಲೆ, ಅವರು ಕನ್ನಡ ಪ್ರಸಿದ್ಧ ಕವಿಗಳ, ಲೇಖಕರ ಗ್ರಂಥಗಳನ್ನು ಓದಿ ಕನ್ನಡದ ಬಗ್ಗೆ ಆಸಕ್ತಿಯನ್ನು ಬೆಳೆಸಿಕೊಂಡಿದ್ದರು. ಪ್ರೊ. ಎಸ್.ವಿ. ಪರಮೇಶ್ವರ ಭಟ್ಟರ ಕನ್ನಡ, ಬಿ.ಎನ್. ಶಾಮರಾಯರ ಇಂಗ್ಲೀಷ್‌ನ ಷೇಕ್ಸಪಿಯರ್ ಪಾಠಗಳು ಅವರ ಮೇಲೆ ಗಾಢವಾದ ಪ್ರಭಾವ ಬೀರಿ, ಎರಡನೇ ವರ್ಷಕ್ಕೆ ಬರುವ ವೇಳೆಗೆ ಸಾಹಿತ್ಯ ವಿದ್ಯಾರ್ಥಿಯಾಗಬೇಕೆಂದು ನಿರ್ಧರಿಸಿದ್ದರು. ಕುವೆಂಪು ಅವರ ಕೃತಿಗಳನ್ನು; ಫ.ಗು. ಹಳಕಟ್ಟಿಯವರ ವಚನ ಸಾಹಿತ್ಯಗಳನ್ನೆಲ್ಲ ಓದಿದರು. ಶರಣರ ಜೀವನ ಚರಿತ್ರೆಗಳನ್ನು, ವಚನಗಳನ್ನು ಓದಿ ಮನನ ಮಾಡಿಕೊಂಡಿದ್ದರು.

ಸಾಹಿತ್ಯ ವಿದ್ಯಾರ್ಥಿಯಾಗಬೇಕೆಂಬ ದೃಢನಿರ್ಧಾರದಿಂದ ಹಿಂದೆ ಸರಿಯದೆ, ಮೈಸೂರು ಮಹಾರಾಜ ಕಾಲೇಜಿನಲ್ಲಿ ಬಿ.ಎ. ಆನರ್ಸ್‌ಗೆ ಸೇರಿದರು. ಕುವೆಂಪು, ಎನ್. ಅನಂತರಂಗಾಚಾರ್, ಡಿ.ಎಲ್. ನರಸಿಂಹಾಚಾರ್, ತೀ.ನಂ. ಶ್ರೀಕಂಠಯ್ಯ, ಎಸ್.ವಿ. ಪರಮೇಶ್ವರ ಭಟ್ಟ, ದೇ. ಜವರೇಗೌಡ, ಉ.ಕಾ. ಸುಬ್ಬರಾಯಾಚಾರ್, ಕೆ.ವಿ. ರಾಘವಾಚಾರ್, ತ.ಸು. ಶಾಮರಾಯರು ಸೇರಿದಂತೆ ಅನೇಕ ದಿಗ್ಗಜರುಗಳು ಅವರ ಗುರುಗಳಾಗಿದ್ದರು. ಅವರು ಮಾಡುತ್ತಿದ್ದ ಪಾಠಗಳು ತಿಪ್ಪೇರುದ್ರಸ್ವಾಮಿಗಳವರಲ್ಲಿ ಸಾಹಿತ್ಯದ ಬಗ್ಗೆ ಆಳವಾಗಿ ಚಿಂತನೆ ಮಾಡಲು ಪ್ರೇರಣೆ, ಪ್ರಭಾವ ಬೀರಿದವು. ಬಿ.ಎ. ಆನರ್ಸ್‌ನಲ್ಲಿ ಪ್ರಥಮ ದರ್ಜೆ ಪ್ರಥಮ ರ್‍ಯಾಂಕ್‌ಗಳಿಸಿದ ಪ್ರತಿಭಾವಂತ ವಿದ್ಯಾರ್ಥಿ ಎಂಬ ಕೀರ್ತಿಗೆ ಭಾಜನರಾದರು. ಚಿನ್ನದ ಪದಕದ ಜೊತೆಗೆ ಮೂರು ಬಹುಮಾನಗಳನ್ನು ತಮ್ಮ ಮಡಿಲಿಗೆ ಹಾಕಿಕೊಂಡರು.

ಆಗ ಬಿ.ಎ. ಆನರ್ಸ್ ಮುಗಿಸಿದವರಿಗೆ ಕಾಲೇಜು ಅಧ್ಯಾಪಕರ ಕೆಲಸ ಸಿಗುತ್ತಿದ್ದರೂ, ತಮ್ಮ ಗುರುಗಳ ಸಲಹೆಯಂತೆ ಎಂ.ಎ.ಗೆ ಸೇರಿದರು. ಇವರ ಜೊತೆಗೆ ಜಿ. ಗುಂಡಣ್ಣನವರು, ಜಿ.ಎಸ್. ಶಿವರುದ್ರಪ್ಪನವರು ಇವರ ಸಹ ಪಾಠಿಗಳಾಗಿದ್ದರು. ಎಂ.ಎ. ತರಗತಿಯಲ್ಲಿ ಪ್ರಥಮ ರ್‍ಯಾಂಕ್ ಪಡೆದು ಚಿನ್ನದ ಪದಕ ಮತ್ತು ಎರಡು ಬಹುಮಾನಗಳನ್ನು ಪಡೆದರು. ಪ್ರಾಥಮಿಕ ಹಂತದಿಂದ ಎಂ.ಎ. ವರೆಗೂ ಮೊದಲ ಸ್ಥಾನವನ್ನು ಉಳಿಸಿಕೊಂಡು ಬಂದ ಪ್ರತಿಭಾವಂತ ತಿಪ್ಪೇರುದ್ರಸ್ವಾಮಿ ಅವರು. ಎಂ.ಎ. ಮುಗಿಯುವ ವೇಳೆಗೆ ತಮ್ಮ ಹೆಸರನ್ನು 'ಎಚ್. ತಿಪ್ಪಯ್ಯ' ಎಂಬ ಹೆಸರನ್ನು ಎಚ್. ತಿಪ್ಪೇರುದ್ರಸ್ವಾಮಿ ಎಂದು ಅಧಿಕೃತವಾಗಿ ಬದಲಾಯಿಸಿಕೊಂಡರು.

ವೃತ್ತಿ ಜೀವನ : ೧೯೫೨ರಲ್ಲಿ ಹಾಸನದ ಸರ್ಕಾರಿ ಇಂಟರ್ ಮೀಡಿಯೇಟ್ ಕಾಲೇಜಿನಲ್ಲಿ ಅಧ್ಯಾಪಕರಾಗಿ ವೃತ್ತಿ ಜೀವನವನ್ನು ಪ್ರಾರಂಭಿಸಿದರು. ವೃತ್ತಿಯಲ್ಲಿ ಯಶಸ್ವಿಯಾಗ ಬೇಕಾದರೆ ತಮ್ಮ ಜ್ಞಾನದ ಕ್ಷಿತಿಜವನ್ನು ವಿಸ್ತರಿಸಿಕೊಳ್ಳಬೇಕೆಂದು ನಿರಂತರ ಅಧ್ಯಯನದಲ್ಲಿ ತೊಡಗಿಸಿಕೊಂಡರು. ಅವರು ಅಧ್ಯಯನ ಪಠ್ಯಪುಸ್ತಕಗಳಿಗಷ್ಟೇ ಸೀಮಿತಗೊಳ್ಳದೆ ಕನ್ನಡದ ಪ್ರಮುಖ ಪ್ರಾಚೀನ ಅರ್ವಾಚೀನ ಕವಿಗಳೆಲ್ಲರವರೆಗೂ ವ್ಯಾಪಿಸಿತ್ತು. ಅದು ಕೇವಲ ಕನ್ನಡ ಸಾಹಿತ್ಯಕಷ್ಟೇ ಮೀಸಲಾಗದೆ ಸಂಸ್ಕೃತ ಮತ್ತು ಪಾಶ್ಚಾತ್ಯ ಸಾಹಿತ್ಯವನ್ನು ಒಳಗೊಂಡಿತ್ತು. ಚಾರಸಿನಿಂದ ಹಿಡಿದು ಷೇಕ್ಸ್‌ಪಿಯರ್, ಶೆಲ್ಲಿ ಮ್ಯಾಥ್ಯೂ, ಆರ್ನಾಲ್ಡ್, ಹಡ್ಸನ್, ಥಾಮಸ್ ಹಾರ್ಡಿ, ಚಾರ್ಲ್ಸ್ ಡಿಕಿನ್ಸ್, ಕನ್‌ಫ್ಯೂಷಿಯಸ್, ಟಾಲ್‌ಸ್ಟಾಯ್, ಮ್ಯಾಕ್ಸಿಂಗಾರ್ತಿ ಮೊದಲಾದ ಪ್ರಮುಖರ ಸಾಹಿತ್ಯ ಹಾಗೂ ವಿಮರ್ಶಾತ್ಮಕ ಬರಹಗಳ ಅಧ್ಯಯನ ಅವರಲ್ಲಿ ತಪಸ್ಸಿನಂತೆ ನಡೆದಿತ್ತು.

ಪಿ.ಹೆಚ್‌ಡಿ ಪದವಿ : ವಿದ್ವಾಂಸರಾದ ಪ್ರೊ. ಸ.ಸ. ಮಾಳವಾಡ ಅವರ ಮಾರ್ಗದರ್ಶನದಲ್ಲಿ 'ಶರಣರ ಅನುಭಾವ ಸಾಹಿತ್ಯ' ಕುರಿತಂತೆ ಮಹಾಪ್ರಬಂಧವನ್ನು ರಚಿಸಿ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದರು. ೧೯೬೨ರಲ್ಲಿ ಡಾಕ್ಟರೇಟ್ ಪದವಿಯನ್ನು ಮಾನ್ಯ ಮಾಡಿತು.

ಕುಟುಂಬ : ವಿದ್ವಾನ್ ಎನ್. ಕರಿಬಸವಯ್ಯ ಮತ್ತು ಶ್ರೀಮತಿ ಪಾರ್ವತಮ್ಮ ದಂಪತಿಗಳ ಸುಪುತ್ರಿ ಎನ್.ಕೆ. ಗೌರಮ್ಮನವರನ್ನು ಬಾಳಸಂಗಾತಿಯನ್ನಾಗಿ ಕೈಹಿಡಿಯುವ ಮೂಲಕ ೧೯೫೫ರಲ್ಲಿ ಗೃಹಸ್ಥಾಶ್ರಮ ಸ್ವೀಕರಿಸಿದರು. ಸುಸ್ಕೃತ ಕುಟುಂಬದಿಂದ ಬಂದುದರಿಂದ ಸರಳತೆ, ಸಜ್ಜನಿಕೆ, ವಿನಯವಂತಿಕೆ, ಅತಿಥಿ ಸತ್ಕಾರದಿಂದ, ಬಂಧುಗಳ ಮನಸ್ಸನ್ನು ಸೂರೆಗೊಂಡಿದ್ದರು. ಪತಿಗೆ ತಕ್ಕ ಸತಿಯಾಗಿ ಹಾಲು ಜೇನಿನಂತ ಸಂಸಾರ. ಡಾ. ತಿಪ್ಪೇರುದ್ರಸ್ವಾಮಿಯವರ ಸಾಧನೆಗೆ, ಯಶಸ್ಸಿಗೆ ಸ್ಫೂರ್ತಿಯಾಗಿದ್ದರು. ಇವರ ದಾಂಪತ್ಯದ ಪ್ರೀತಿಯ ಕುರುಹಾಗಿ ಕೀರ್ತಿಗೆ ಇಬ್ಬರು ಗಂಡು ಮಕ್ಕಳು, ಆರುತಿಗೆ ಇಬ್ಬರು ಹೆಣ್ಣು ಮಕ್ಕಳು.

ಸಾಹಿತ್ಯ ಕೃಷಿ : ಈಗಾಗಲೇ ಪ್ರಸ್ತಾಪಿಸಿದಂತೆ ಡಾ. ತಿಪ್ಪೇರುದ್ರ ಸ್ವಾಮಿಯವರು ವಿವಿಧ ಪ್ರಕಾರಗಳಿಗೆ ಸೇರಿದಂತೆ ನೂರಕ್ಕೂ ಹೆಚ್ಚು ಮೌಲಿಕ ಕೃತಿಗಳನ್ನು ನೀಡಿ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತಗೊಳಿಸಿದ್ದಾರೆ. ಅವರು ಕೃತಿಗಳನ್ನು ರಚಿಸುವ ಮುನ್ನ ಅದಕ್ಕೆ ಪೂರಕವಾದ ಅಂಶಗಳನ್ನು ವಿಪುಲವಾದ ಅಧ್ಯಯನದ ಮೂಲಕ ವಿಶ್ಲೇಷಣೆಗೆ ಒಳಪಡಿಸಿ ಬರೆಯುತ್ತಿದ್ದರು. ಅವರು ಬರೆದ ಎಲ್ಲ ಕೃತಿಗಳೂ ಮಹತ್ವವಾದವುಗಳೇ. ಉದಾಹರಣೆಗಾಗಿ ಕೆಲವನ್ನು ಇಲ್ಲಿ ಉಲ್ಲೇಖಿಸಬಹುದು. ಪರಿಪೂರ್ಣದೆಡೆಗೆ (ಅಲ್ಲಮಪ್ರಭು), ಕದಳಿಯ ಕರ್ಪೂರ (ಅಕ್ಕಮಹಾದೇವಿ), ಜ್ಯೋತಿ ಬೆಳಗುತಿದೆ (ನಿಜಗುಣ ಶಿವಯೋಗಿ), ವಚನ ವಿರೂಪಾಕ್ಷ (ಹರಿಹರ-ರಾಘವಾಂಕ), ಕರ್ತಾರನ ಕಮ್ಮಟ (ಬಸವಣ್ಣ), ನೆರಳಾಚೆಯ ಬೆಳಗು





(ಸಿದ್ಧರಾಮ), ಸತ್ಯಾಶ್ರಯ ಸಾಮ್ರಾಜ್ಯ (ಇಮ್ಮಡಿ ಪುಲಕೇಶಿ) ಮೊದಲಾದ ಕಾದಂಬರಿಗಳನ್ನು, ವಿಧಿವಂಚಿತ, ಮೋಳಿಗೆಯ ಮಾರಯ್ಯ, ನಿಜಗುಣ ಶಿವಯೋಗಿ, ನಾಟಕಗಳನ್ನು, ತಪೋರಂಗ, ತಿಪ್ಪೇರುದ್ರ ವಚನಗಳು, ಕಾವ್ಯವನ್ನು, ಶಿಸ್ತುಗಾರ ಶಿವಪ್ಪನಾಯಕ, ಕರ್ನಾಟಕ ಶರಣ ಕಥಾಮೃತ, ಅವಿರಳ ಜ್ಞಾನ ಚನ್ನಬಸವಣ್ಣ ಮೊದಲಾದ ಜೀವನ ಚರಿತ್ರೆಗಳನ್ನು, ಶರಣರ ಅನುಭಾವ ಸಾಹಿತ್ಯ, ಕರ್ನಾಟಕ ಸಂಸ್ಕೃತಿಯ ಸಮೀಕ್ಷೆ, ವಚನಗಳಲ್ಲಿ ವೀರಶೈವ ಧರ್ಮ, ಬಸವೇಶ್ವರ, ವಚನದೀಪಿಕೆ ಮೊದಲಾದ ಉದ್ಗ್ರಂಥಗಳನ್ನು, ಭಾವಗೀತೆ, ಕನ್ನಡದಲ್ಲಿ ಅನುಭಾವ ಸಾಹಿತ್ಯ, ಕುವೆಂಪುರವರ ನಾಟಕಗಳು, ಅನುಭವ ಮಂಟಪ, ವಚನ ಚಳವಳಿ, ಕನ್ನಡದಲ್ಲಿ ಕೈವಲ್ಯ ಸಾಹಿತ್ಯ, ವೀರಶೈವ ಸಂಸ್ಕೃತಿ, ಮೊದಲಾದ ವಿಮರ್ಶಾ ಗ್ರಂಥಗಳನ್ನು ನೀಡಿದ್ದಾರೆ. ಇವರ ಅನೇಕ ಕೃತಿಗಳು ಶಾಲಾ ಕಾಲೇಜುಗಳಲ್ಲಿ ಪಠ್ಯಪುಸ್ತಕಗಳಾಗಿವೆ. ಬಹುತೇಕ ಕೃತಿಗಳು ಮರು ಮುದ್ರಣವಾಗಿರುವುದು ಅವರ ವಿದ್ವತ್ತಿಗೆ ಸಂದ ಮನ್ನಣೆಯಾಗಿದೆ.

ದಕ್ಷ ಆಡಳಿತಗಾರರಾಗಿ : ಡಾ. ತಿಪ್ಪೇರುದ್ರಸ್ವಾಮಿ ಅವರು ವಿವಿಧ ಹುದ್ದೆಗಳಲ್ಲಿ ಸೇವೆ ಸಲ್ಲಿಸಿ, ಆಯಾ ಹುದ್ದೆಗಳಿಗೆ ಘನತೆ, ಮೌಲ್ಯಗಳನ್ನು ತಂದುಕೊಟ್ಟರು. ದಕ್ಷತೆ, ಪ್ರಾಮಾಣಿಕತೆ, ಬದ್ಧತೆಗಳಿಂದ ಆಯಾ ಹುದ್ದೆಗಳ ವ್ಯಾಪ್ತಿಯಲ್ಲಿ ಬರುವ ಕಾರ್ಯಗಳನ್ನು ಯಶಸ್ವಿಯಾಗಿ ಅನುಷ್ಠಾನಕ್ಕೆ ತಂದುಕೊಟ್ಟ ಕೀರ್ತಿಗೆ ಭಾಜನರಾದರು. ಅಂಚೆ ಮತ್ತು ತೆರಪಿನ ಶಿಕ್ಷಣ ಸಂಸ್ಥೆ ಬಿ.ಆರ್. ಪ್ರಾಜೆಕ್ಟ್‌ನ ಸ್ನಾತಕೋತ್ತರ ಕೇಂದ್ರ, ಕನ್ನಡ ಅಧ್ಯಯನ ಸಂಸ್ಥೆ ಹಾಗೂ ಗಾಂಧೀ ಭವನದ ನಿರ್ದೇಶಕರಾಗಿ, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಸ್ಥಾಪಕ ಅಧ್ಯಕ್ಷರಾಗಿ ಅನುಪಮ ಸೇವೆ ಸಲ್ಲಿಸಿದ ಹಿರಿಮೆ.

ಪ್ರಶಸ್ತಿಗಳು - ಗೌರವ : ಡಾ. ತಿಪ್ಪೇರುದ್ರಸ್ವಾಮಿಯವರು ಎಂದೂ ಕೀರ್ತಿ, ಹೆಸರಿಗಾಗಿ ಹಂಬಲಿಸಿದವರಲ್ಲ. ನಿರಂತರವಾಗಿ ಸಾಹಿತ್ಯ ಕೃಷಿ ಕಾರ್ಯಗಳಲ್ಲಿ ತೊಡಗಿಸುವಲ್ಲಿ ಸಂತೋಷ, ನೆಮ್ಮದಿಯನ್ನು ಕಾಣತ್ತಿದ್ದರು. ಅವರ ಸಾಧನೆಯಿಂದ ಪ್ರಭಾವಿತಳಾದ ಕೀರ್ತಿ ದೇವತೆ ಬೇಡವೆಂದರೂ ಬಿಡದೆ ಬೆನ್ನತ್ತಿ ಬಂದಳು. ಅವರ 'ಪರಿಪೂರ್ಣದೆಡೆಗೆ' ಕಾದಂಬರಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, 'ಕರ್ನಾಟಕ ಸಂಸ್ಕೃತಿ ಸಮೀಕ್ಷೆ' ಗ್ರಂಥಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, 'ನೆರಳಾಚೆಯ ಬೆಳಗು' ಕಾದಂಬರಿಗೆ ಹಾಗೂ ಅವಿರಳ ಜ್ಞಾನಿ ಚನ್ನಬಸವಣ್ಣ ಕೃತಿಗೆ ಇಳಕಲ್ ಮಠದ ಶ್ರೀ ವಿಜಯ ಮಹಾಂತೇಶ್ವರ ಸಾಹಿತ್ಯ ಪ್ರಶಸ್ತಿ, 'ತಿಪ್ಪೇರುದ್ರ ವಚನಗಳು' ಕೃತಿಗೆ ಹುಬ್ಬಳ್ಳಿಯ ಮೂಜಗಂ ಗ್ರಂಥ ಪುರಸ್ಕಾರ, 'ಬಸವೇಶ್ವರ ವಚನ ದೀಪಿಕೆ' ಕೃತಿಗೆ ಸಂ.ಶಿ. ಭೂಷನೂರ ಮಠ ಪ್ರತಿಷ್ಠಾನದ ೧೯೯೫ರ ಕನ್ನಡದ ಮಹತ್ವದ ಗ್ರಂಥ ಪ್ರಶಸ್ತಿಗಳು ದೊರೆತಿವೆ.

'ಶರಣ ಸಾಹಿತ್ಯ ಸಿದ್ಧಾಂತ ರತ್ನ', ಒಟ್ಟು ಸಾಹಿತ್ಯ ಸಾಧನೆಗೆ ಕರ್ನಾಟಕ ರಾಜ್ಯ ಅಕಾಡೆಮಿ ಗೌರವ, ಇಳಕಲ್‌ನಲ್ಲಿ ರೂಪಾಯಿ ನಾಣ್ಯಗಳಿಂದ ತುಲಾಬಾರ, ಮೈಸೂರು ಜಿಲ್ಲಾ ೪ನೆಯ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರು, ಹೊನ್ನಾಳಿ ತಾಲ್ಲೂಕು ಮೊದಲ

ಸಾಹಿತ್ಯ ಮತ್ತು ಜಾನಪದ ಸಮ್ಮೇಳನಾಧ್ಯಕ್ಷರು, ಮೈಸೂರು ಕವಿ ಸಮ್ಮೇಳನದಲ್ಲಿ ಸನ್ಮಾನ, ಮೈಸೂರಿನಲ್ಲಿ ೬ನೇ ಕನ್ನಡ ಸಮ್ಮೇಳನದಲ್ಲಿ ಧರ್ಮಸ್ಥಳದ ಶ್ರೀ ವೀರೇಂದ್ರ ಹೆಗ್ಗಡೆಯವರಿಂದ ಸನ್ಮಾನ. ಅವರ ಗೌರವಾರ್ಥವಾಗಿ ಕುವೆಂಪು ವಿಶ್ವವಿದ್ಯಾನಿಲಯದಲ್ಲಿ 'ತಿಪ್ಪೇರುದ್ರಸ್ವಾಮಿ ಸಭಾಂಗಣ' ಲೋಕಾರ್ಪಣೆ ಹಾಗೂ ಅವರ ಭಾವಚಿತ್ರ ಅನಾವರಣ, ಹೊನ್ನಾಳಿ ಸರ್ಕಾರಿ ಸಂಯುಕ್ತ ಪದವಿಪೂರ್ವ ಕಾಲೇಜಿನಲ್ಲಿ ಡಾ. ಹೆಚ್. ತಿಪ್ಪೇರುದ್ರಸ್ವಾಮಿ ಸ್ಮಾರಕ ಗ್ರಂಥ ಭವನ ಲೋಕಾರ್ಪಣೆ ಹಾಗೂ ಅವರ ಕಂಚಿನ ಪುತ್ಥಳಿ ಅನಾವರಣವೂ ಸೇರಿದಂತೆ ಪ್ರಶಸ್ತಿ, ಗೌರವಗಳು ದೊರಕಿವೆ. ಈ ಎಲ್ಲಾ ಪ್ರಶಸ್ತಿ ಗೌರವಗಳನ್ನು ಅತ್ಯಂತ ವಿನಮ್ರತೆಯಿಂದ ಸ್ವೀಕರಿಸಿದ ಹೃದಯವಂತಿಕೆ. ಅವರು ಸಾಹಿತ್ಯ ಕ್ಷೇತ್ರಕ್ಕೆ ನೀಡಿದ ಅನುಪಮ ಸೇವೆಗಾಗಿ, ಶ್ರೀ ಸಿದ್ಧಗಂಗಾ ಮಠದಿಂದ ೨೦೧೪ರಲ್ಲಿ 'ಸಿದ್ಧಗಂಗಾಶ್ರೀ' ಪ್ರಶಸ್ತಿಯನ್ನು ಮರಣೋತ್ತರವಾಗಿ ನೀಡಿ ಗೌರವವನ್ನು ಸಲ್ಲಿಸಿದುದುದನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳಬಹುದಾಗಿದೆ.

ಅರವತ್ತಾರು ವರ್ಷಗಳ ಬೇವು ಬೆಲ್ಲವನ್ನು ಸಮಚಿತ್ತದಿಂದ ಸವಿದು, ಅರ್ಥಪೂರ್ಣವಾಗಿ ಜೀವನ ನಡೆಸಿ, ಶ್ರೇಷ್ಠ ಅಧ್ಯಾಪಕರಾಗಿ, ವಾಗ್ಮಿಗಳಾಗಿ, ಆಡಳಿತಗಾರರಾಗಿ, ಸಾಹಿತಿಗಳಾಗಿ ತಮ್ಮ ಬದುಕನ್ನೇ ಮೀಸಲಾಗಿಟ್ಟು, ಎಲ್ಲರೊಂದೊಳಗಾಗಿ ಆದರ್ಶ ಜೀವನ ನಡೆಸಿ ಅಕ್ಟೋಬರ್ ೨೮ರಲ್ಲಿ ಲಿಂಗದೊಳಗೊಂದಾದರು. ಈ ಸಂದರ್ಭದಲ್ಲಿ ದಾರ್ಶನಿಕ ಸಾಕ್ರೆಟಿಸ್‌ನ ಮಾತುಗಳು ನೆನಪಿಗೆ ಬರುತ್ತವೆ. ಒಮ್ಮೆ ಸಾಕ್ರೆಟಿಸ್ ಶಿಷ್ಯರನ್ನು ಕೇಳಿದ "ಜೀವನದ ಸಾರ್ಥಕ್ಯ ಯಾವುದರಲ್ಲಿದೆ?" ಶಿಷ್ಯರೆಲ್ಲ ತಮಗೆ ತೋರಿದ ಉತ್ತರಗಳನ್ನು ನೀಡಿದರು. ಗುರುವಿಗೆ ಯಾವುದೂ ಸಮರ್ಪಕವೆನ್ನಿಸಲಿಲ್ಲ. ಆತ ಹೇಳಿದ "ಜೀವನದ ಸಾರ್ಥಕ ಬದುಕಿನಲ್ಲಿಲ್ಲ, ಬದುಕಿನಾಚೆ ಇದೆ, ಸತ್ತ ಮೇಲೆ ಎಷ್ಟು ಜನರ ಹೃದಯಗಳಲ್ಲಿ ನಿಮ್ಮ ನೆನಪು ಹಸಿರಾಗಿರುತ್ತದೆಯೋ, ಎಷ್ಟು ಜನ ನಿಮ್ಮನ್ನು ಕೃತಜ್ಞತೆಯಿಂದ ಸ್ಮರಿಸುತ್ತಾರೆಯೋ ಅದರಲ್ಲಿದೆ. ಆ ಸ್ಮರಣೆ ಬರುವುದು ನೀವು ಬದುಕಿದ ಮೌಲ್ಯಗಳಿಂದ, ಬದುಕಿನಲ್ಲಿ ಘನತೆಯನ್ನು ನೀಡುವುದರೊಂದಿಗೆ ಸಾವಿನಲ್ಲಿಯೂ ಘನತೆ ತರುತ್ತದೆ. ಹಾಗೆ ಬದುಕಿ ಮರೆಯಾದವರು ಡಾ. ಹೆಚ್. ತಿಪ್ಪೇರುದ್ರಸ್ವಾಮಿ ಅವರು. ಅವರಿಗೆ ನನ್ನ ಗೌರವಪೂರ್ವಕ ನಮನ.



ತನ್ನದಾದಡೇನೋ ಕನ್ನಡಿ
ಅನ್ಯರದಾದಡೇನೋ ಕನ್ನಡಿ
ತನ್ನ ರೂಪ ಕಂಡಡೆ ಸಾಲದೆ
ಸದ್ಗುರು ಅವನಾದಡೇನೋ
ತನ್ನನರುಹಿಸಿದಡೆ ಸಾಲದೆ
ಸಿಮ್ಮಲಿಗೆಯು ಚೆನ್ನರಾಮಾ





# ಅನಾದಿ ಗಣ ಮರುಳಾರ್ಯ ವಂಶ

## ಚಂದ್ರಶೇಖರ ಕಗ್ಗಲ್ಲುಗೌಡ್ರು

**ಹ**ನ್ನೆರಡನೆ ಶತಮಾನದಲ್ಲಿ ಆರಂಭವಾದ ಕಲ್ಯಾಣದ ಕ್ರಾಂತಿಯ ಕಿಚ್ಚು ತನ್ನ ವ್ಯಾಪ್ತಿ ಪ್ರದೇಶವನ್ನು ಮೀರಿ ಬೆಳಕಾಗಿದ್ದನ್ನು ಶಾಸನಗಳ ಅಧ್ಯಯನದ ಮೂಲಕ ತಿಳಿದುಕೊಳ್ಳಬಹುದು. ಚಾಮರಾಜನಗರ ತಾಲ್ಲೂಕಿನ ಹರದನಹಳ್ಳಿ ತಾಮ್ರ ಶಾಸನದಲ್ಲಿ ಮರುಳಾರ್ಯ ಹೆಸರು ಉಲ್ಲೇಖವಿರುವುದು ಸಂಶೋಧಕರ ಗಮನವನ್ನು ಸೆಳೆಯುತ್ತದೆ. ಮರುಳಾರ್ಯ ಯಾರು ಎಂದು ಈ ಲೇಖನದಲ್ಲಿ ತಿಳಿಯುವ ಪ್ರಯತ್ನ ಮಾಡಲಾಗಿದೆ.

ಹರದನಹಳ್ಳಿ ಗ್ರಾಮದವರೊಬ್ಬರಿಂದ ಹಾಜರುಮಾಡಲ್ಪಟ್ಟ ತಾಮ್ರಶಾಸನ. ಚಾಮರಾಜ ನಗರ ತಾಲ್ಲೂಕು. ಶಾಸನ ಸಂಖ್ಯೆ ೨೯೨. (ರಿ.೧೯೩೦-೩೧) ಎಪಿಗ್ರಫಿಯ ಕರ್ಣಾಟಿಕ.

ಮುಂಭಾಗ

೦೧. ಶ್ರೀ ನಮಸ್ತುಂಗ ಸಿರಶ್ಚುಂಬಿ ಚಂದ್ರಚಾಮರಚಾರವೆ ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೇ

೦೨. ಶ್ರೀಮದ್ಹೋಸಲಾರ್ಯ ಯತಿ ಪ್ರಸೀದ

೦೩. ಶ್ರೀಮತ್ಸಚ್ಚಿದಾನಂದ ನಿತ್ಯಸಂಪೂರ್ಣ ಅವಿರಳಜ್ಞಾನಾನಂದ ಪರಂಜ್ಯೋತಿ ಸ್ವರೂಪ ಜಗದ್ವಿಸ್ತಾರ ಮೂಲ ಸ್ಥಂಭಾಯಮಾನ ಚ

೦೪. ರಾಚರ ಜಗಜ್ಜಾಲ ಜನ್ಮಕಾರಣೀಭೂತ ಶೃತಿ ಸ್ಮೃತಿ ಪುರಾಣಗಮೇತಿಹಸ ಷಟಸ್ಥಳ ಪರಬ್ರಹ್ಮ ಪರಬ್ರಹ್ಮೇಷ್ಟ ಲಿಂಗಾರಾಧಕ ತತ್ವ

೦೫. ಮಸ್ಯಾದಿ ಮಹವಾಕ್ಯ ವಿಚಾರ ಧುರೀಣ ಶ್ರೀಮದ್ವಾಣಿಜ್ಯಪುರಿಮಠಾದಿಪತ ಅನಾದಿ ಗಣ ಮರುಳಾರ್ಯವಂಶ ಪರಂಪರಾನುಗ

೦೬. ತ ಪರಿವಿಡಿದ್ರಾಜಗುರು ಅಪ್ಪಣಾರ್ಯ ನಿಜಗರ್ಭಸಂಜನಿತ ವೇದವೇದಾಂತೋನಿಷತ್ಸಾರೋದಿತ ಮಹನಿಜ ಪಟ್ಟ ಮೂರ್ತಿಯಾಗಿ

೦೭. ಕಲ್ಲುಗೂಳಿಯಂ ನುಡಿಸಿ ಪಂದವಡಿಯನೆಂಬುವನ ದಾಸೋಹದಲ್ಲವಗೆ ಘೃತಕಡಮೆಯಾಗೆ ಕುಂಭೋದಕವ ತರಿಸಿ ಉಣಬಡಿಸಿ

೦೮. ಕುಲಾಂತರಮಿಗೆ ಕೂಟವಾಲುಗಳಂ ವಿಂಗಡಿಶಿ ಮುನೂರುಮೂವತ್ತೈದು ಪಂಗಡ(ಗ)ಳನಾಗಮಾಡಿ ತತ್ತವರಿಗೆ ಆರಾಧ

ನಿವೃತ್ತ ಕನ್ನಡ ಭಾಷಾ ಶಿಕ್ಷಕರು ಮತ್ತು ರಾಜ್ಯ ಸಂಪನ್ಮೂಲ ವ್ಯಕ್ತಿಗಳು (ಕನ್ನಡ)
ಮೈಸೂರು. ೯೪೪೮೯೩೮೪೪೮

೦೯. ಕರಾಗಿಯು ಕೋವಿನಕೆರೆ ಸಾಸಲರಾಯನೆಂಬುವಗೆ ಲಿಂಗಧಾರಣೆಯಂ
ಮಾಡಿ ಪಟಗಾರ ರಾಯಂಣನಾಯ್ಕನಿಗೆ ಮಲೆನಾ

೧೦. ಡಿಗೆ ಪಟ್ಟವಂ ಕಟ್ಟಿ ಕುಳವಂದಕೆ ವಂಬತ್ತು ತ್ರಯಪಣದಂತ್ತೆ ಯಲ್ಲರೊಳು
ಕಟ್ಟು ಕಾಣಿಕೆಗಳಂನು ಪಡೆದು ಪಡಿವತ್ತಿ ದೇಶಕ್ಕೆ ಪ್ರ

೧೧. ಯಾಣ ಮಾಡಿ ಸರ್ಪದಷ್ಟನಾದ ರಾಜನ ಮಗನಂ ಬದುಕಿಸಿ ವಾದದಲ್ಲಿ
ಗೆಲದು ನಾಮವಂನು ತೆಗಿಶಿ ಭಸ್ಮವಂ ಇಡಿಸಿ ಲಿಂಗಧಾರಣೆ

೧೨. ಯಂ ಮಾಡಿ ತುಳುವ ದೇಶಕ್ಕೆ ಬಂದು ತುಲಕಾಣ್ಯರಿಗೆ ಮಹಿಮೆಯಂ
ತೋರಿ ಶತವವಾಡ ಮಹನೀಯರೆಂದು ಬಿರುದುಂ ವಡೆದ

೧೩. ಶ್ರೀಮದ್ಹೋಸಲಾರ್ಯವರ್ಯಸ್ವಾಮಿ ಸನ್ನಿಧಾನ ನಂಕಾಶೆ ಸ್ವಸ್ತಿ
ಸಮಸ್ತಭುವನಾಶ್ರಯ ಶ್ರೀ ಪ್ರಿತ್ವಿವಲ್ಲಭ ಶ್ರೀ ಪ್ರತಾಪಚಕ್ರವರ್ತಿ ಹೊಯ್ಸಳ

೧೪. ವೀರಬಲ್ಲಾಳದೇವರು ಶ್ರೀವಿಜಯಾಭ್ಯುದಯ ಶಾಲಿವಾಹನ ಶಕವರ್ಷಂಗಳು
೧೨೪೬ ನೆಯ ತಾರಣ ಸಂಬತ್ತರದ ಮಾಗ ಸು

೧೫. ದ್ದ ತದಿಗೆಯಲು ದಕ್ಷಿಣದೇಶ ವಿಜಯಯಾತ್ರೆಯಲು ಬರಸಿಕೊಟ್ಟ
ತಾಂಬ್ರಶಾಸನ ಕ್ರಮವೆಂತೆಂದೊಡೆ ೧ ಹಿರಿ ಮಡಿವಾಳದ ಶಿವ

೧೬. ನಂಕಾರೇಶ್ವರರಿಗೆ ಚಂದ್ರಮಣಿಮಠದವರು ೨ ಮಾದೇಶ್ವರರಿಗೆ
ಕಂಚಿತೆಲುಗಾಣ್ಯದ ಮಠ ೩ ವಂದೇಶ್ವರರಿಗೆ ಶ್ರೀ ವಾಣಿಜ್ಯಮರಿಮಠ

೧೭. ೪ ಸಿದ್ದೇಶ್ವರರಿಗೆ ಕೆಂಬಲ್ಲೂರು ಮಠ ೫ ಬ್ರಂಹ್ಮೇಶ್ವರರಿಗೆ
ಮಹಲಿಂಗಿಮಠವೆಂತಲೂ ಈ ಪಂಚೈದು ಲಿಂಗಗಳಿಗೆ ಈ ಮಠಗಳೆಂದು ವಿಧಿಸಿ

೧೮. ಶಿ ತತ್ತದೇವಸ್ಥಾನಕೆ ಸೇರಿದ ತಂಮಡಿಗಳು ಶಿಷ್ಯರು ಬೇಡಗಂಪಣಗಳಿಗೆ
ತತ್ತಮಠಾಧಿಪತಿಗಳೇ ಲಿಂಗಧಾರಣ ತೀರ್ಥ ಪ್ರಸಾದಗಳಂ

೧೯. ಕೊಟ್ಟು ಅವರಿಂ ಕಟ್ಟು ಕಾಣಿಕೆಗಳಂ ತೆಗೆದು ಆ ದೇವಾಲಯಗಳಲಿ ನಡೆಯುವ
ಯಲ್ಲಾ ಕಾರ್ಯಗಳಂ ನಡೆಸ ತಕ್ಕುದೆಂದು ನೇಮಿಸಿರುತೇ

೨೦. ವೆ ಶ್ರೀಮಾಹದೇಶ್ವರಸ್ವಾಮಿಯು ಕತ್ತಲಿರಾಜ್ಯದೊಳು ಇದು ಕನ್ಯಾಳ ದೇಶಕ್ಕೆ
ಬಂದು ಸಮಸ್ತ ದೇವತೆಗಳು ಶ್ರವಣನಲಿ ಸೇರಿಸಿರುವದಂ

೨೧. ನೋಡಿ ಅವನಂ ಸಂಹಾರ ಮಾಡಿ ಪ್ರಭುಲಿಂಗಾರಾಧ್ಯರಿಂದ ಲಿಂಗಧಾರಣೆಯಂ
ಮಾಡಿಸಿಕೊಂಡು ವಜ್ರಮಲೆಯಲಿ ನೆಲೆಗೊಂಡು ಆಲಂಬಾಡಿ
ಚುಂಚೇಗಲುಡನಿಂದ ವಂ

೨೨. ದು ಅಂಕಣ ದೇವಾಲಯಂ ಕಟ್ಟಿಸಿಕೊಂಡು ಭೂಸುರನಿಂ ಬೇಡರ
ಕಂನಯನಿಂದ ಪೂಜಿಸಿಕೊಂಡು ಬೇಡರ ದೃಢಕೆ ಮೆಚ್ಚಿ

೨೩. ಮೋಕ್ಷವಂ ಕೊಟ್ಟು ಕುಂನಪನಾಗರುಸೀಮೆ ಇದ್ದ ಬೇಡಗಂಪಣ
ರಾಯಂಣನಾಯ್ಕನ ಮನೆಯಲಿ ಕೊಂಗ ದೊರೆಯು ಹೆಣ್ಣು ಕೇಳಿದ್ದರಿಂದ





೨೪. ಅವರು ತಲೆತಪ್ಪಿಸಿಕೊಂಡು ಹೋಗುತಬರಲು ದಾರಿಯಲಿ
ತುಂಗಭದ್ರಾನದಿಯು ಅಡ್ಡಲಾಗಿದುದರಿಂದ ದಾಟಲಸಾಧ್ಯಮಾಗಿ ಪಾ

೨೫. ರ್ವತಿ ಅಂಶಳಾದ ಭದ್ರಕಾಳಿ ಅಂಮನವರಂ ಭಜಿಸಲು ಆ ದೇವಿಯು
ಪ್ರತ್ತೆಕ್ಷಳಾಗಿ ಇವರ ಮನೋಭೀಷ್ಟವಂ ನೆರವೇರಿಸಿ ನದಿಯಿಂ ದಾರಿ

೨೬. ಡಿಸಿ ಹೊರಗೆ ಬಂದು ಇತಪ್ಪರ ಮಕ್ಕಳಾದರೆ ಭದ್ರಿ ಭದ್ರಯಂಬ ಹೆಸರಂ
ಕೊಡುತ್ತೇವೆಂದು ಹೇಳಿ ನೇರಳೆಕೆರೆಯಲಿ ಸ್ಥಳವಾಗಿದ್ದ

೨೭. ರು ಮೇಲಿನ ಪಂಚಮಠದ ಸ್ವಾಮಿಗಳು ಬಂದು ಬೇಡಗಂವಣಕ್ಕೆ
ಲಿಂಗಧಾರಣೆಯಂ ಮಾಡಿ ರಾಯಪ್ಪನಾಯ್ಕರಿಗೆ ವೋಕಳಿಸೇ

೨೮. ವೆಗೆ ಕರ್ತನ ಮಾಡಿ ಶ್ರೀಮಹದೇವನು ಉಪ್ಪಲಿಗಶೆಟ್ಟಿಯ ದೃಢಕ್ಕೆ ಮೆಚ್ಚಿ
ಗುಡ್ಡನ ಮಾಡಿ ಯಂಣೆಮಜ್ಜನದ ಸೇವೆಗೆ ಕರ್ತನ

೨೯. ಮಾಡಿ ಭಕ್ತರುಗಳಿಂ ದೇವಾಲ್ಯವಂ ವಿಸ್ತರಿಸಿ ಇದಕೆ ಪೂಜಾಕರ್ತರು
ಆಲಸಾಲಂಮನ ವಂಸಸ್ಥರಾದ ಕೆಂಪಮಾದ ತಂಮಡಿಕಾಳ

೩೦. ಮಾದ ತಂಮಡಿಸಂತತಿಯವರಿಂದ ಕಾಡವೀರ ತಮ್ಮಡಿಮಕ್ಕಳು
ಪೂಜವಿರುದ್ಧವಂ ಮಾಡಿಕೊಂಡು ವ್ಯಾಜ್ಯಕೆ ಬರಲು ಇದಕೆ ಮೊ

೩೧. ದಲಾಳಿಯಾದವನ ಮೊಂಣುವಾಲಿನವನ ಶಿವಾಗಮದ ಸೇವೆಗೆ ನೇಮಿಸಿ
ಹುಡುಗರು ಪೂಜಾಕರ್ತರೆಂದು ಇವರು ಉತ್ತಭೂಮಿಗೆ ತೆರಿಗೆ

೩೨. ಇಲ್ಲವೆಂದು ಮಾಡಿ ಪಟಗಾರ ರಾಯಂಣನಾಯ್ಕನಿಗೆ ಬಿಳಿಚತ್ರಿ ಪಂಚೆ
ವಂಟತೋಡ ಬಳೆ ಶಾಲು ನಾಮೆ ಸಹ ಕೊಟ್ಟು ಕಂ

೩೩. ಪಣಕ್ಕೆ ಕರ್ತನೆಂದು ನಿಂನ ತದ್ವಂಶಪರಂಪರೆಯಾಗಿ ನಡಿಸಿಕೊಂಡು
ಬರತಕ್ಕುದೆಂದು ನಿಯಮಿಸಿ ಪಟಗಾರರಾಯಂ

೩೪. ಣನಾಯ್ಕರ ವಂಶದವರು ಪಂಜೇಶ್ವರತಂಮಡಿಗಳು ಮತ್ತು ಶಿಷ್ಯರುಗಳು
ಹಿಂಡಿ ರಾಮನ ಗುಂಪು ಬೆಳೆಕೂಟ ದೊಂಣೆ ಕೂ

೩೫. ಟ ಗುವನರಿನ ಕೂಟ ಮಿಂಡಗುಡ್ಡಿವಾಲಿನವರು ಕೆರೆಣೆವಾಲಿನವರು
ಶಿವನಂಕಾರೇಶ್ವರನ ವಕ್ಕಲಿನವರು ಈ ಪಂಜ್ಞ ಇದು

೩೬. ದೇವಸ್ತಾನದ ಮೇಲುವಿಚಾರ ಅದಿಕಾರವನು ಶ್ರೀವಾಣಿಜ್ಯಮಠಾಧಿಪತಿಗಳಿಗೆ
ಬಿಟ್ಟು ಮಾದೇಶ್ವರಬೆಟ್ಟದ ಉರಿಗದ್ದಿಗೆಯೆಂ

೩೭. ಬ ವಿರಕ್ತ ಕಟ್ಟೆಯಲಿ ಅಇದನೆ ವಂದು ಬಾಗ ಕಾಣಿಕೆ ಕೊಡುವದಲದೆ
ರಾಯನಹಳ್ಳಿ ಬಸವನಪುರಯಂಬ ಗ್ರಾಮ ಹಿಂಭಾಗ

೩೮. ಗಳಂ ಬಿಟ್ಟು ಆ ಗ್ರಾಮದ ಕಾಡಾರಂಬ ನೀರಾರಂಬ ಗೊವ್ವಲ ವೊಂಮೆಸುಂಕ
ದೇವಾದಾಯ ಬ್ರಂಹಾದಾಯ ನಟ್ಟ ಕಲ್ಲು ಬಿಟ್ಟ ಬಸವ ಮೊ

೩೯. ದಲಾದುವುಗಳನ್ನು ಈ ಮಠಕೆ ಅಮೃತಪಡಿ ದೀಪಾರಾಧನೆ
ಕಾರ್ಯಂಗಳಿಗಾಗಿ ಕೊಡುವುದಲದೆ ನಿಂಮ ತದ್ವಂಶ ಪರಂಪರೆಯಾ
೪೦. ಗಿ ಆ ಚಂದ್ರಾರ್ಕಸ್ತಾ ಇ ಆಗಿ ನಡೆಸಿಕೊಂಡು ಬರತಕ್ಕುದೆಂದು ಬರೆಸಿಕೊಟ್ಟ
ತಾಂಬ್ರಶಾಸನ ಇದಕೆ ತಪಿದವರು ಗಂಗೆಯ ತ
೪೧. ಡಿಯಲಿ ಸಹಸ್ರಕವಿಲೆಯಂ ಕೊಂದ ಪಾವಕೆ ಹೋಹರು ಸ್ವದತ್ತಾಂ ಪರದತ್ತಾಂ
ವಾ ಯೋ ಹರೇತಿ ವಸುಂಧರಾ ಷಷ್ಠಿರ್ವರ್ಷನ
೪೨. ಹಸ್ರಾಣಿ ವಿಷ್ಟಾಯಾಂ ಜಾಯತೆ ಕ್ರಿಮಿಃ ಮಂಗಳಮಾಹ ಶ್ರೀ ಶ್ರೀ ಅಲ್ಲಾಳನಾಥ.

ಈ ಮೇಲಿನ ಶಾಸನ ಹೊಯ್ಸಳರ ಬಲ್ಲಾಳನಿಗೆ ಸೇರಿದ್ದು ಶ್ರೀ ಗುರು ಗೋಸಲಾರ್ಯನ ಸಮ್ಮುಖದಲ್ಲಿ ಐದು ಲಿಂಗಾಯತ ಮಠಗಳಿಗೆ ಕೆಲವು ಅಧಿಕಾರವನ್ನು ಕೊಟ್ಟು ಗೌರವಿಸಿದನ್ನು ತಿಳಿಸುತ್ತದೆ. ಐದು ಲಿಂಗಾಯತ ಮಠಗಳೆಂದರೆ ಚಂದ್ರಾಣಿ ಮಠ, ಕಂಚಿ ತೆಲುಗಾಣ್ಯದ ಮಠ, ವಾಣಿಜ್ಯಪುರಿ ಮಠ, ಕೆಂಬಲ್ಲೂರು ಮಠ ಮತ್ತು ಮಹಾಲಿಂಗಿ ಮಠ.

ಗೋಸಲಾರ್ಯನು ವಾಣಿಜ್ಯಪುರಿ (ಈಗಿನ ಹರದನಹಳ್ಳಿ) ಮಠದ ಮುಖ್ಯಸ್ಥನಾಗಿದ್ದು ಅಪ್ಪಣಾರ್ಯನ ಮಗನಾಗಿದ್ದನು. ಇಲ್ಲಿ ಮಗ ಎಂದರೆ ಶಿಷ್ಯನೆಂದು ತಿಳಿಯಬೇಕು. ಅಪ್ಪಣಾರ್ಯನು ಮರುಳಾರ್ಯನಿಂದ ಗುರೂಪದೇಶವನ್ನು ಪಡೆದಿದ್ದು ಅವನ ತತ್ವ ಪರಂಪರೆಯನ್ನು ಮುಂದುವರೆಸಿಕೊಂಡು ಬಂದಿದ್ದನು. ಈ ಶಾಸನ ಹಲವಾರು ಪವಾಡಗಳನ್ನು ದಾಖಲಿಸಿದೆ.

ಮಲೆ ಮಹಾದೇಶ್ವರನ ಸಾಧನೆಗಳನ್ನು ಈ ಶಾಸನದಲ್ಲಿ ನಾವು ಕಾಣಬಹುದು. ಹಿರಿಮಡಿವಾಳದ ಶಿವನಂಕಾರೇಶ್ವರರಿಗೆ ಚಂದ್ರಾಣಿ ಮಠ, ಮಾದೇಶ್ವರರಿಗೆ ಕಂಚಿ ತೆಲುಗಾಣ್ಯದ ಮಠ, ವಂದೇಶ್ವರರಿಗೆ ವಾಣಿಜ್ಯಪುರಿ, ಸಿದ್ದೇಶ್ವರರಿಗೆ ಕೆಂಬಲ್ಲೂರು ಮಠ ಮತ್ತು ಬ್ರಂಹ್ಮೇಶ್ವರರಿಗೆ ಮಹಲಿಂಗಿ ಮಠ ಎಂದು ವಿಧಿಸಿ ಐದು ಮಠಗಳಿಗೆ ಐದು ಲಿಂಗಗಳನ್ನು ಜೋಡಿಸಿದೆ. ಆ ಐದು ದೇವಸ್ಥಾನಗಳಿಗೆ ಸೇರಿದ ಶಿಷ್ಯರು, ತಂಮಡಿಗಳು ಹಾಗೂ ಬೇಡಗಂಪಣಗಳಿಗೆ ಐದು ಮಠಾಧಿಪತಿಗಳೇ ಲಿಂಗಾಧಾರಣೆ ತೀರ್ಥ ಪ್ರಸಾದಗಳನ್ನು ಕೊಟ್ಟು ಅವರಿಂದ ಕಾಣಿಕೆಗಳನ್ನು ಪಡೆದು ಆ ಎಲ್ಲಾ ದೇವಾಲಯಗಳಲ್ಲಿ ನಡೆಯುವ ಕಾರ್ಯಗಳನ್ನು ನಡೆಸಲು ನೇಮಿಸಿದೆ.

ಶ್ರೀ ಮಹಾದೇಶ್ವರಸ್ವಾಮಿಯವರು ಕತ್ತಲಿರಾಜ್ಯದಲ್ಲಿ ಇದ್ದು ಕನ್ಯಾಳದೇಶಕ್ಕೆ ಬಂದರೆಂದು ಶಾಸನ ತಿಳಿಸುತ್ತದೆ. ಪ್ರಭುಲಿಂಗಾರಾಧ್ಯರಿಂದ ಲಿಂಗದೀಕ್ಷೆ ಪಡೆದು ವಜ್ರಮಲೆಯಲ್ಲಿ ನೆಲೆಸಿದರು. ಆಲಂಬಾಡಿ ಚುಂಚೇಗೌಡನಿಂದ ಒಂದು ಅಂಕಣ ದೇವಾಲಯವನ್ನು ಕಟ್ಟಿಸಿಕೊಂಡು ಭೂಸುರ ಬೇಡರ ಕನ್ನಯ್ಯನಿಂದ ಪೂಜಿಸಿಕೊಂಡು ಅವನ ಭಕ್ತಿಗೆ ಮೆಚ್ಚಿ ಮೋಕ್ಷವನ್ನು ಕರುಣಿಸಿದರು.

ಕುನ್ನಪ್ಪ ನಾಗರ ಸೀಮೆಯಲ್ಲಿದ್ದ ಬೇಡಗಂಪಣರಾಯಂಣನಾಯ್ಕನ ಮನೆಯಲ್ಲಿ





ಕೊಂಗ ದೊರೆಯು ಹೆಣ್ಣು ಕೇಳಿದ್ದರಿಂದ ಅವರು ತಲೆ ತಪ್ಪಿಸಿಕೊಂಡು ಹೋಗಿಬರುವಾಗ ದಾರಿಯಲ್ಲಿ ತುಂಗಾಭದ್ರಾನದಿಯು ಅಡ್ಡವಾಗಿ ಸಿಗುತ್ತದೆ. ಆ ನದಿಯನ್ನು ದಾಟಲು ಅಸಾಧ್ಯವಾಗಿದ್ದರಿಂದ ಪಾರ್ವತಿ ಸ್ವರೂಪಳಾದ ಭದ್ರಕಾಳಿಯನ್ನು ಭಜಿಸುತ್ತಾರೆ. ಭದ್ರಕಾಳಿ ಪ್ರತ್ಯಕ್ಷಳಾಗಿ ಇವರ ಮನೋಕಾಮನೆಯನ್ನು ಈಡೇರಿಸಿ ನದಿಯಿಂದ ದಾರಿ ಬಿಡಿಸಿ ಕಳುಹಿಸುತ್ತಾಳೆ. ಅದಕ್ಕೆ ಪ್ರತಿಫಲವಾಗಿ ಎರಡು ಮಕ್ಕಳಾದರೆ ಭದ್ರ ಮತ್ತು ಭದ್ರಿ ಎಂಬ ಹೆಸರನ್ನು ಇಡುವುದಾಗಿ ಮಾತು ಕೊಡುತ್ತಾರೆ. ನೇರಳಕೆರೆ ಸ್ಥಳವಾಗಿದ್ದರೂ ಮೇಲೆ ಉಲ್ಲೇಖಿಸಿದ ಪಂಚಮಠದ ಸ್ವಾಮಿಗಳು ಬೇಡರ ಗುಂಪಿಗೆ ಲಿಂಗಧಾರಣೆಯನ್ನು ಮಾಡಿ ರಾಯಪ್ಪನಾಯ್ಕರಿಗೆ ಹೋಕಳಿ ಸೇವೆಗೆ ಕರ್ತನ ಮಾಡಿ ಶ್ರೀ ಮಹದೇವನು ಉಪ್ಪಲಿಗ ಶೆಟ್ಟಿಯ ದೃಢಭಕ್ತಿಗೆ ಮೆಚ್ಚಿದನು. ಎಣ್ಣೆ ಮಜ್ಜನ ಸೇವೆಗೆ ಕರ್ತನ ಮಾಡಿ ದೇವಾಲಯವನ್ನು ವಿಸ್ತರಿಸಿದನು. ಇದಕ್ಕೆ ಪೂಜಾಕರ್ತರು ಆಲಸಾಲಮ್ಮನ ವಂಶಸ್ಥರಾದ ಕೆಂಪಮಾದ ತಮ್ಮಡಿ.

ಕಾಳಮಾದ ತಮ್ಮಡಿ ಸಂತತಿಯವರಿಂದ ಕಾಡವೀರ ತಮ್ಮಡಿ ಮಕ್ಕಳು ಪೂಜೆಗೆ ವಿರೋಧ ಮಾಡಿಕೊಂಡಿದ್ದರಿಂದ ವ್ಯಾಜ್ಯ ಆರಂಭವಾಯಿತು. ಇದರಿಂದಾಗಿ ಮೊದಲು ಆಳಿದವನ ಮೊಂಣುಪಾಲಿನವನ ಶಿವಾಗಮದ ಸೇವೆಗೆ ಹುಡುಗರನ್ನು ಪೂಜಾಕರ್ತರೆಂದು ನೇಮಿಸಿದನು. ಇವರು ಉಳುವ ಭೂಮಿಗೆ ತೆರಿಗೆ ಮನ್ನಾ ಮಾಡಿ ಪಟಗಾರ ರಾಯಂಣನಾಯ್ಕನಿಗೆ ಬಿಳಿಚತ್ರಿ ಪಂಚೆ ಒಂಟಿ ತೊಡುವ ಬಳೆ ಶಾಲು ನಾಮೆ ಕೊಟ್ಟನು. ಕಂಪಣಕ್ಕೆ ಕರ್ತನೆಂದು ವಂಶಪರಂಪರೆಯಾಗಿ ನಡೆಸಿಕೊಂಡು ಬರತಕ್ಕುದೆಂದು ನಿಯಮಿಸಿದನು. ಪಟಗಾರ ರಾಯಣ್ಣ ವಂಶದವರು ಪಂಜೇಶ್ವರ ತಮ್ಮಡಿಗಳು ಮತ್ತು ಶಿಷ್ಯರು ಹಿಂಡಿ ರಾಮನ ಗುಂಪು ಬೆಳೆಕೂಟ, ದೊಣ್ಣೆ ಕೂಟ, ಗುರುವಿನ ಕೂಟ, ಮಿಂಡಗುಡ್ಲಿವಾಲಿನವರು, ಕೆರಣೆವಾಲಿನವರು, ಶಿವನಂಕಾರೇಶ್ವರನ ಒಕ್ಕಲಿನವರು ಈ ಪಂಚೈದು ದೇವಸ್ಥಾನದ ಮೇಲ್ವಿಚಾರ ಅಧಿಕಾರವನ್ನು ಶ್ರೀವಾಣಿಜ್ಯಪುರಿ ಮಠಾಧಿಪತಿಗಳಿಗೆ ಬಿಟ್ಟರು.

ಮಾದೇಶ್ವರ ಬೆಟ್ಟದ ಉರಿಗದ್ದಿಗೆ ಎಂಬ ವಿರಕ್ತ ಕಟ್ಟೆಯಲ್ಲಿ ಐದನೆ ಒಂದು ಭಾಗ ಕಾಣಿಕೆ ಕೊಡುವುದಲ್ಲದೆ ರಾಯನಹಳ್ಳಿ ಬಸವಪುರವೆಂಬ ಗ್ರಾಮಗಳನ್ನು ಬಿಟ್ಟು ಕೊಟ್ಟಿದೆ. ಆ ಗ್ರಾಮದ ಕಾಡಾರಂಬ ನೀರಾರಂಬ ಗೋಪಾಲ ಒಮ್ಮೆ ಸುಂಕ ದೇವಾದಾಯ, ಬ್ರಹ್ಮದಾಯ ನಟ್ಟ ಕಲ್ಲುಬಿಟ್ಟ ಬಸವ ಮೊದಲಾದವನ್ನು ಈ ಮಠಕ್ಕೆ ಅಮೃತಪಡಿ ದೀಪಾರಾಧನೆ ಕಾರ್ಯಗಳಿಗೆ ಕೊಡುವುದಲ್ಲದೆ ನಿಮ್ಮ ವಂಶಪರಂಪರೆಯಾಗಿ ಸೂರ್ಯ ಚಂದ್ರ ಇರುವವರೆಗೂ ನಡೆಸಿಕೊಂಡು ಬರತಕ್ಕದೆಂದು ಬರಸಿಕೊಟ್ಟ ತಾಮ್ರಶಾಸನವಾಗಿದೆ. ಈ ಶಾಸನವನ್ನು ಉಲ್ಲಂಘಿಸಿದಲ್ಲಿ ಗಂಗೆಯ ತಡಿಯಲ್ಲಿ ಸಾವಿರ ಗೋವನ್ನು ಕೊಂದ ಪಾಪಕ್ಕೆ ಹೋಗುವರು. ಈ ಲೋಕ ಪರ ಲೋಕದಲ್ಲಿ ಕೂಡ ಕ್ರಿಮಿಯಾಗಿ ಹುಟ್ಟುವರು.

ಈ ಶಾಸನದ ಕಾಲವನ್ನು ಶಾಲಿವಾಹನ ೧೨೪೬ ತಾರಣ ಸಂವತ್ಸರ ಮಾಘ ಶುದ್ಧ ೩ ಎಂದು ಶಾಸನದಲ್ಲಿಯೇ ಬರೆದಿದೆ. ಆದರೆ ತಾರಣ ಸಂವತ್ಸರ ೧೨೬೬ರಲ್ಲಿ ಬಂದಿದ್ದು

೧೨೪೬ರಲ್ಲಿ ರಕ್ತಾಕ್ಷಿ ಸಂವತ್ಸರ ಎಂದು ಶಾಸನ ತಜ್ಞರು ನಿರ್ಣಯಿಸಿರುವುದರಿಂದ ಶಾಸನ ಕಾಲವನ್ನು ಶಾಲಿವಾಹನ ಶಕ ೧೨೬೬ ಎಂದು ಒಪ್ಪಿಕೊಳ್ಳಬಹುದು. ಇದರ ಪ್ರಕಾರ ಕ್ರಿ.ಶ. ೧೩೪೫ ಜನವರಿ ೭ಕ್ಕೆ ಶಾಸನದ ಕಾಲ ಸರಿ ಹೊಂದುತ್ತದೆ. ಹೊಯ್ಸಳರ ನಾಲ್ಕನೇ ಬಲ್ಲಾಳನನ್ನೆ ವೀರಬಲ್ಲಾಳ ಎಂದು ಶಾಸನದಲ್ಲಿ ಬರೆದಿದೆ.

ಶಾಸನದಲ್ಲಿ "ಶ್ರೀಮದ್ವಾಣಿಜ್ಯಪುರಿಮಠಾದಿಪತ ಅನಾದಿ ಗಣ ಮರುಳಾರ್ಯವಂಶ ಪರಂಪರಾನುಗತ ಪರಿವಿಡಿದ್ರಾಜಗುರು ಅಪ್ಪಣಾರ್ಯ ನಿಜಗರ್ಭಸಂಜನಿತ" ಮತ್ತು ಶ್ರೀಮದ್ಗೋಸಲಾರ್ಯವರ್ಯಸ್ವಾಮಿ ಎಂದು ಬರೆದಿರುವುದರಿಂದ ಮರುಳಾರ್ಯ, ರಾಜಗುರು ಅಪ್ಪಣಾರ್ಯ ಮತ್ತು ಗೋಸಲಾರ್ಯ ಇವರ ಬಗ್ಗೆ ಬೆಳಕು ಚೆಲ್ಲಬೇಕಾಗಿದೆ.

ಷಡಾಕ್ಷರ ದೇವ (ಕ್ರಿ.ಶ. ೧೬೫೫) ಚತುರಾಚಾರ್ಯರನ್ನು "ಬಸವರಾಜ ವಿಜಯಂ" ಎಂಬ ಕೃತಿಯಲ್ಲಿ "ಚತುರಾಚಾರ್ಯಪದಾಂಬುಜಂಗಳೆಮಗೀಗಾಮೋದ ಸಂದೋಹಮಂ" ಎಂದು ನೆನೆದಿದ್ದಾನೆ. ಆದರೆ ಚತುರಾಚಾರ್ಯರ ಹೆಸರನ್ನು ದಾಖಲಿಸಿಲ್ಲ. ಷಡಾಕ್ಷರ ದೇವ ತನ್ನ ಇನ್ನೊಂದು ಕೃತಿ "ಶಬರಶಂಕರ ವಿಳಾಸಂ"ದಲ್ಲೂ ಭಕ್ತಿಯಿಂದ ಸ್ಮರಿಸಿದ್ದು ಹೀಗಿದೆ.

ಶ್ರುತಿ ನಿತ್ಯ ವೀರಶೈವಾ
ಶ್ರಿತರ ಪರಾಭೂತದುರ್ಮತ ಪ್ರಕಾರದ ಸ
ಮ್ಮತರ ವಿತತ ಪ್ರಭಾವರ
ಚತುರಾಚಾರ್ಯರ ಪದಾಬ್ಜಕಾಂ ನುತನಪ್ಪೆಂ.

ಎಂದಿದ್ದಾನೆ. ಇಲ್ಲಿಯೂ ಚತುರಾಚಾರ್ಯರ ಹೆಸರನ್ನು ಉಲ್ಲೇಖಿಸಿಲ್ಲ. ಈತನದೇ ಮತ್ತೊಂದು ಕೃತಿಯಾದ "ರಾಜಶೇಖರ ವಿಳಾಸಂ"ದಲ್ಲಿ ಚತುರಾಚಾರ್ಯರ ಹೆಸರನ್ನು ಉಲ್ಲೇಖಿಸಿದ್ದು ಹೀಗೆ.

ರೇಣುಕ ರಾಮ ಪಂಡಿತ ಮಹಾಮರುಳಾರ್ಯರ ಮಾಯಿದೇವರಂ
ಜಾಣನ ಜಕ್ಕಣ್ಣಾರ್ಯನ ಜಗನ್ನುತ ಮಲ್ಲಣ ಮಲ್ಲಣಾರ್ಯರಂ
ಪ್ರೀಣಿತ ಶಂಭುಶಂಕರ ಹರೀಶ್ವರ ರಾಘವ ಕೇಶಿರಾಜರಂ
ಮಾಣದೆ ಬಣ್ಣಿಸುತ್ತೆರಗಿ ಮೇಣ್ಪಡೆವೆಂ ಪರಮಾರ್ಥಸಿದ್ಧಿಯಂ.

ಇಲ್ಲಿ ರೇಣುಕನೆಂದರೆ ರೇವಣಸಿದ್ಧನೆಂದೇ ತಿಳಿಯಬೇಕಾಗುತ್ತದೆ. ರೇವಣಸಿದ್ಧನನ್ನು ರೇಣುಕನೆಂದು ಬದಲಾಯಿಸಿ ೧೭ನೇ ಶತಮಾನದ ಅಂತ್ಯಕಾಲಕ್ಕಾಗಲೆ ಪಂಚಾಚಾರ್ಯರ ಪ್ರಭಾವಕ್ಕೆ ಕವಿ ಒಳಗಾದಂತೆ ಕಾಣುತ್ತಾನೆ. ರಾಮನೆಂದರೆ ಚತುರಾಚಾರ್ಯರಲ್ಲಿನ ಏಕೋರಾಮ, ಪಂಡಿತ ಎಂದರೆ ಶಿವಲೆಂಕಮಂಚಣ್ಣ ಪಂಡಿತಾರಾಧ್ಯ, ಹಾಗೆಯೇ ಮರುಳಾರ್ಯನೆಂದರೆ ಮರುಳಸಿದ್ಧ. ಒಟ್ಟಾರೆ ಮಹಾಕವಿ ಷಡಾಕ್ಷರದೇವನಿಗೆ ಚತುರಾಚಾರ್ಯರ ಮೇಲೆ ಅಪಾರ ಗೌರವ ಭಕ್ತಿಯಿರುವುದು ಆತನ ಪ್ರತಿಯೊಂದು





ಕೃತಿಯಲ್ಲಿ ಚತುರಾಚಾರ್ಯ ಸ್ತುತಿ ಮೂಲಕ ಕಾಣಬಹುದು.

ದೇವಚಂದ್ರ (ಕ್ರಿ.ಶ.೧೭೭೦-೧೮೪೧)ಕೆರೆಯ ಪದ್ಮರಸನ ಸಂತತಿ, ಕೇಶಿರಾಜನ ಸಂತತಿ ಈ ಮುಂತಾದ ಸಂತತಿಯವರ ಬಗೆಗೆ ಇವನು "ರಾಜಾವಳಿ ಕಥಾಸಾರ"ದಲ್ಲಿ ತಿಳಿಸುತ್ತ ಚತುರಾಚಾರ್ಯರನ್ನು ಸಿಂಹಾಸನಾಧಿಪತಿಗಳ ಮಾಡಿದೆ ಎಂದಿರುವನು. "ಪಂಡಿತಾರಾಧ್ಯ ರೇವಣಾರಾಧ್ಯ ಏಕೋರಾಮಾರಾಧ್ಯ ಮರುಳಾರಾಧ್ಯ ಚತುಃ ಸಿಂಹಾಸನಾಧಿಪತಿಗಳಂ ಮಾಡಿ" ಈ ಚತುರಾಚಾರ್ಯರ ಪೀಠಗಳನ್ನು ಪಂಚಾಚಾರ್ಯರು ತಮ್ಮ ವಶಕ್ಕೆ ತೆಗೆದುಕೊಂಡಿರುವ ಘಟನೆಯನ್ನು ಕವಿ ಹೇಳುತ್ತಿರಬೇಕು. ೧೮ನೇ ಶತಮಾನದ ಅರ್ಧ (ಸು. ೧೭೪೦) ಭಾಗಕ್ಕೆ ಶ್ರೀ ತರಳಬಾಳು ಮಠ ಉಜ್ಜಿನಿಯಿಂದ ಸಿರಿಗೆರೆಗೆ ಸ್ಥಳಾಂತರಗೊಂಡಿರುವುದು ಈ ಮೇಲಿನ ವಾಕ್ಯಕ್ಕೆ ಪುಷ್ಟಿಯನ್ನು ಒದಗಿಸುತ್ತದೆ.

ರಾಮಗಿರಿಯ ನಾಗಭೂಷಣ (ಕ್ರಿ.ಶ. ೧೮ ನೇ ಶತಮಾನ) ಇವನು ಮರುಳಸಿದ್ಧನನ್ನು ಕುರಿತು "ಮರುಳಸಿದ್ಧೇಶ್ವರ ಸಾಂಗತ್ಯ"ವನ್ನು ರಚಿಸಿದ್ದಾನೆ. ಕಾವ್ಯದ ಆರಂಭದಲ್ಲಿ ಚತುರಾಚಾರ್ಯರನ್ನು ನೆನೆದುಕೊಂಡಿದ್ದು ಹೀಗಿದೆ.

ಮುನಿಪನಾಡಿದ ಮಾತಿಗೆ ಮೆಚ್ಚಿ ಶಶಿಧರ
ಘನರೇವಣ್ಣ ಮರುಳಯ್ಯನ
ಅನುಕೂಲದೇಕೋರಾಮನು ಪಂಡಿತರನು
ಚಿನುಮಯ ಕರೆದು ಪೇಳಿದರೂ.

ಶಿವನೊಡ್ಡೋಲಗದಿಂದಲೇ ಚತುರಾಚಾರ್ಯರ ಉಲ್ಲೇಖ ಇಲ್ಲಿ ಬಂದಿದೆ. ನಾಗಭೂಷಣನು ದೇವ ಕವಿಯನ್ನು ಹೆಸರಿಸದಿರುವುದು ಆಶ್ಚರ್ಯ. ಸಾಂಗತ್ಯಕ್ಕೂ ಮರುಳಸಿದ್ಧ ಚರಿತ್ರೆಗೂ ಒಂದೆರಡು ಕಡೆಗಳಲ್ಲಿ ಮಾತ್ರ ವ್ಯತ್ಯಾಸಗಳಿವೆ. ಮರುಳಸಿದ್ಧನನ್ನು ಕಾಪಾಡುವವಳು ಮುಕ್ತಾಯಕ್ಕ, ಮರುಳಸಿದ್ಧನ ತಂದೆ ತಾಯಿಗಳು ಕಲ್ಯಾಣದಿಂದ ಬಂದ ಶಿವಶರಣ ಮಾರಯ್ಯ ಮತ್ತು ಸೊನ್ನಲದೇವಿ. ಈ ರೀತಿಯಾಗಿ ಮರುಳಸಿದ್ಧನ ಜನನ ಮತ್ತು ತಂದೆ ತಾಯಿಯನ್ನು ಬೇರೆಯಾಗಿ ಚಿತ್ರಿಸಿ ಇತಿಹಾಸವನ್ನು ತಿರುಚಿ ಮತ್ತ್ಯಾರಿಗೋ ಅನುಕೂಲ ಮಾಡಿಕೊಡುವ ಪ್ರಯತ್ನ ಮಾಡಿದ್ದಾನೆ.

ಕವಿ ಚೆನ್ನಮಲ್ಲೇಶ "ಶೀಲವಂತಯ್ಯನ ತ್ರಿವಿಧಿ"ಯಲ್ಲಿ ಕವಿ ಚೆನ್ನಮಲ್ಲೇಶ ಮರುಳಸಿದ್ಧರನ್ನು ಸ್ತುತಿಸಿದ್ದು ಹೀಗೆ.

ಶ್ರೀಗುರುದೇವಂಗೆ ಆಗಮಾತೀತಂಗೆ
ನಾಗಕಂಕಣಗೆಯತಿವರ ಮರುಳಾರ್ಯಂಗೆ
ರಾಗದಿಂದೊಮ್ಮೆ ಶರಣೆಂಬೆ
ಹೃದ್ಯಶೈವಾದ್ವೈತ ವೇದ್ಯವೇದಾಂತಕ
ಸಾಧ್ಯಜಗದೇಕ ಚೋದ್ಯರೂಪಾದ ಆ

ರಾಧ್ಯ ಮರುಳೇಶ ಶರಣಾಗು

ಗವಿಯ ಸಿದ್ಧಾರ್ಯಕೃತ "ಮಠಸ್ಥಲ ತ್ರಿವಿಧಿ"ಯಲ್ಲಿ ೭೨ ತ್ರಿಪದಿಗಳಿವೆ. ಇದರಲ್ಲಿ ಚತುರಾಚಾರ್ಯರಾದ ರೇವಣಸಿದ್ಧ, ಮರುಳಸಿದ್ಧ, ಏಕೋರಾಮ, ಪಂಡಿತಾರಾಧ್ಯರು ಪಂಚಾಚಾರ್ಯರಾದ ರೇಣುಕ ಪರಂಪರೆಯಲ್ಲಿ ಬಂದುದನ್ನು

ಶ್ರೀ ಕೈಲಾಸದಲ್ಲಿ ರೇಣುಕ ಗಣೇಶ್ವರನು
ತಾ ಕಲಿಯುಗದ ಮೊದಲ ಪಾದದ ಕೊಲ್ಲಿ
ಪಾಕಿ ಸೋಮೇಶ್ವರನೊಳಗುದಿಸಿ

ಖ್ಯಾತಿಯಿಂ ಕೈಲಾಸನಾಥ ನಿಂ ದಾರುಕಾ
ಭೂತದೊಳಗೆ ಮರುಳಾಚಾರ್ಯ ನಾಮದಿ
ಜ್ಯೋತಿ ಸಿದ್ಧೇಶನೊಳಗುದಿಸಿ
ಶ್ರೀ ಕೈಲಾಸದ ಹರನ ವಾಕು ನಿರೂಪದಿ
ಶಂಕುಕರ್ಣನೆಂಬ ಗಣನಾಥನೆ ಘನ
ಏಕೋರಾಮನಾಮಾಂಕಿತದಲಿ

ಎಂದು ತಿಳಿಸುತ್ತಾ ಚತುರಾಚಾರ್ಯರನ್ನು ಕುರಿತು ಹೇಳಲಾಗಿದೆ. ಕೈಲಾಸ (ಅಂದರೆ ಇಲ್ಲಿ ಆದಿ, ಮೂಲ)ದಲ್ಲಿ ರೇಣುಕ ಇದ್ದವನು ನಂತರ ರೇವಣಸಿದ್ಧನಾದುದು, ದಾರುಕ ಮರುಳಸಿದ್ಧನಾದದ್ದು, ಶಂಕುಕರ್ಣ ಏಕೋರಾಮನಾಗಿದ್ದು ಕವಿ ತಿಳಿಸುತ್ತಾನೆ. ಆದರೆ ಶಿವಲೆಂಕಮಂಚಣ್ಣನ ಹೆಸರು ಬಾರದೆ ಕೇವಲ ಪಂಡಿತಾರಾಧ್ಯನೆಂದಷ್ಟೆ ಹೇಳಿ ಆತ ಮೂಲ ಯಾವ ಪರಂಪರೆಯಿಂದ ಬಂದವನೆಂಬುವುದರ ಬಗೆಗೆ ತಿಳಿಸುವುದಿಲ್ಲ. ಆತನ ಪ್ರಾಣ ಲಿಂಗವಾದ ಚೆನ್ನಮಲ್ಲಿಕಾರ್ಜುನನ ಬಗೆಗೆ ತಿಳಿಸುವದರಿಂದ ಈ ಶ್ರೀಶೈಲ ಪೀಠ ಪರಂಪರೆಗೆ ಸೇರಿದವನಾಗಿರಬೇಕು.

ಹಿರೇ ಸಿಂಧೋಗಿಗೆ ಮರುಳಸಿದ್ಧರು ಆಗಮಿಸಿ ಮಾದಿಗರ ಕೇರಿಯಲ್ಲಿ ಕಂಬಳಿ ಹಾಸಿ ಕೆಲ ಕಾಲ ತಂಗಿದರು. ಆಗ ಜನಪದರು ಹಾಡಿದ್ದು ಹೀಗೆ.

ನನ್ನ ಗುರುವು ಬಡವರಂಗಳಕೆ ನಡೆ ತಂದಾ
ತನ್ನ ಬೆಳ್ಳಿ ಬೆತ್ತ ತಿರುವಿದಾ ಉಜ್ಜಿನಿ ಮರುಳಯ್ಯಾ.

ಕೆಂಭಾವಿಯಿಂದ ಸುರಪುರಕ್ಕೆ ಹೋಗುವ ದಾರಿಯಲ್ಲಿ ಜೈನಾಪುರದ ಬಳಿ ಹೆಗ್ಗನದೊಡ್ಡಿ ಇದೆ. ಇಲ್ಲಿ ಮರುಳಸಿದ್ಧರ ದೇವಸ್ಥಾನವಿದ್ದು ಹೊನ್ನಪ್ಪ ಪೂಜಾರಿ ಜನಪದ ಗೀತೆಯನ್ನು ಹಾಡಿದ್ದಾರೆ.

ಉಜ್ಜಯಿನಿಯಲಿ ಜನಿಸಿ
ಮಾನವ ಶರೀರ ಧರಿಸಿ





ಶಿವಶರಣರು ಹೆಸರಾನಿಟ್ಟು
ಕರೆದಾರು ಮರುಳಸಿದ್ಧ ಎಂದು
ಹೆಗ್ಗನದೊಡ್ಡಿ ವಾಸ ಮರುಳಸಿದ್ಧೇಶ

ಈಗ ಒಂದು ವಿಚಾರ ಸ್ಪಷ್ಟತೆಯನ್ನು ಪಡೆಯುತ್ತದೆ. ಶಾಸನದಲ್ಲಿ ಉಲ್ಲೇಖಿಸಿರುವ ಮರುಳಾರ್ಯ ೧೨ನೇ ಶತಮಾನದ ವಚನಕಾರ ಮರುಳಸಿದ್ಧನೇ ಹೊರತು ಬೇರೆ ಯಾರು ಅಲ್ಲ.

ಮರುಳಸಿದ್ಧ > ಮರುಳಸಿದ್ಧಯ್ಯ >ಮರುಳಾರಾಧ್ಯ> ಮರುಳಯ್ಯ > ಮರುಳಾಚಾರ್ಯ > ಮರುಳಾರ್ಯ ಆಗಿ ರೂಪಾಂತರವಾಗಿದೆ. ಸಂಸ್ಕೃತದ ಆರ್ಯ ಕನ್ನಡದಲ್ಲಿ ಅಯ್ಯ ಆಗಿದೆ. ಕ್ರಿ.ಶ. ೧೧೯೩ರ ಅವ್ವೇರಹಳ್ಳಿ ಶಾಸನದ ಪ್ರಕಾರ ರೇವಣಸಿದ್ಧಬೆಟ್ಟದಲ್ಲಿ ಮರುಳಸಿದ್ಧರು ತಂಗಿದ್ದರು. ಮರುಳಸಿದ್ಧರ ಕಾಲಾವಧಿಯನ್ನು ೧೧೨೦ರಿಂದ ೧೨೨೦ರವರೆಗೆ ಅಂದಾಜಿಸಿದರೆ ಅವರು ೧೦೦ ವರ್ಷ ಬದುಕಿದ್ದರೆಂದು ತರ್ಕಿಸಬಹುದು. ಗೋಸಲಾರ್ಯ ೧೩೪೫ರಲ್ಲಿ ಬದುಕಿದ್ದ ಸಂಗತಿ ಈ ಮೇಲಿನ ತಾಮ್ರ ಶಾಸನದಿಂದ ತಿಳಿದು ಬರುತ್ತದೆ. ಗೋಸಲಾಚಾರ್ಯರ ಗುರು ಅಪ್ಪಣಾರ್ಯ ಹದಿಮೂರನೇ ಶತಮಾನದಲ್ಲಿ ಜೀವಿಸಿದ್ದರೆಂದು ತರ್ಕಿಸಬಹುದು. ೧೩ನೇ ಶತಮಾನದ ಆರಂಭದಲ್ಲಿ ಮರುಳಸಿದ್ಧರು ಬದುಕಿದ್ದರಿಂದ ಮರುಳಾರ್ಯ (ಮರುಳಸಿದ್ಧ) ಮತ್ತು ಅಪ್ಪಣಾರ್ಯರಿಗೆ ಪರಸ್ಪರ ಸಂಪರ್ಕ ಉಂಟಾಗಿದೆ. ಮರುಳಸಿದ್ಧರಿಂದ ತತ್ತ್ವೋಪದೇಶವನ್ನು ಅಪ್ಪಣಾರ್ಯ ಪಡೆದುಕೊಂಡಿರಬೇಕು. ಅದರ ಸ್ಮರಣೆಗಾಗಿ ಅನಾದಿ ಗಣ ಮರುಳಾರ್ಯ ವಂಶ ಪರಂಪರಾನುಗತ ಎಂದು ಶಾಸನದಲ್ಲಿ ಬರೆಯಲ್ಪಟ್ಟಿದೆ. ಇದರಿಂದ ಸ್ಪಷ್ಟವಾಗುವುದೇನೆಂದರೆ ರೇವಣಸಿದ್ಧ, ಮರುಳಸಿದ್ಧ ಮತ್ತು ಸಿದ್ಧರಾಮ ದಕ್ಷಿಣ ಕರ್ನಾಟಕದಲ್ಲಿ ಲಿಂಗಾಯತ ಧರ್ಮಕ್ಕೆ ಭದ್ರ ಬುನಾದಿಯನ್ನು ಹಾಕಿದ್ದಾರೆ. ಈ ಕಾರಣಕ್ಕಾಗಿಯೇ ದಕ್ಷಿಣ ಕರ್ನಾಟಕದಲ್ಲಿ ಈ ಮೂರು ಜನರ ಸ್ಮಾರಕಗಳು ಕಂಡುಬರುತ್ತಿವೆ.

□

ಕಿಚ್ಚು ದೈವವೆಂದು ಹವಿಯ ಬೇಳುವರು
ಕಿಚ್ಚು ಹಾರುವರ ಮನೆಯ ಸುಡುವಾಗ
ಬಚ್ಚಲ ಕೆಸರ ಬೀದಿಯ ಧೂಳ ಚೆಲ್ಲಿ
ಬೊಬ್ಬಿರಿದೆಲ್ಲರ ಕರೆವರು
ಸಿಮ್ಮಲಿಗೆಯ ಚೆನ್ನರಾಮನ ಮಂತ್ರ ತಪ್ಪಿದ ಬಳಿಕ
ವಂದಿಸುವುದ ಬಿಟ್ಟು ನಂದಿಸುತ್ತಿದ್ದರು

# ಡಂಬದ ವೈರಿ ಅಂಬಿಗರ ಚೌಡಯ್ಯಾ

## ಮಲ್ಲಿಕಾರ್ಜುನ ಪಾಲಾಮೂರ್

**ಹ**ನ್ನೆರಡನೇ ಶತಮಾನದ ಶರಣರ ಚಳುವಳಿ ನಮ್ಮ ದೇಶದ ಇತಿಹಾಸದಲ್ಲೇ ಒಂದು ಜನಪರ ಅಂದೋಲನವಾಗಿ ಮಾರ್ಪಟ್ಟಿತ್ತು. ವ್ಯಕ್ತಿಶುದ್ಧಿಯ ಮೂಲಕ ಸಮಾಜ ಶುದ್ಧಿಗೆ ತೊಡಗಿದ ಈ ಅಂದೋಲನದಲ್ಲಿ ವರ್ಗ-ವರ್ಣ-ಲಿಂಗವನ್ನು ಮರೆತು ಲಕ್ಷೋಪಲಕ್ಷ ಜನ ಸೇರಿದರು. ಬಡವ-ಶ್ರೀಮಂತ, ಮೇಲು-ಕೀಳು ಎನ್ನುವ ವರ್ಣ-ವರ್ಗ ತಾರತಮ್ಯವನ್ನು ಹೊಗಲಾಡಿಸಿ ಸಮಾನತೆಯ ತಳಹದಿಯ ಮೇಲೆ ಕಟ್ಟಿದ ಮಂಟಪ ಜ್ಞಾನದಾಸೋಹದ ಸಂಕೇತವಾಗಿ ಬೆಳೆದಿದ್ದು ಕಲ್ಯಾಣದಲ್ಲಿ. ಇದರ ಪ್ರಭಾವದಿಂದಾಗಿ ಸಾಮಾಜಿಕ ಶೋಷಣೆಗೊಳಗಾಗಿದ್ದ ಕೆಳವರ್ಗದ ಶರಣರು ವಚನ ರಚನೆ ಮಾಡತೊಡಗಿದರು. ಅಂಥವರಲ್ಲಿ ಕ್ರಾಂತಿಕಾರಿ ಮನೋಭಾವದ, ಬಂಡಾಯದ ಗುಣವುಳ್ಳ, ನ್ಯಾಯ ನಿಷ್ಠುರಿಯಾಗಿದ್ದ ಅಂಬಿಗರ ಚೌಡಯ್ಯಾ ಒಬ್ಬನು.

ಜೀವನ: ಅಂಬಿಗರ ಚೌಡಯ್ಯನವರ ವೈಯಕ್ತಿಕ ಜೀವನ, ಬದುಕಿದ ಕಾಲ, ಸ್ಥಳದ ಬಗ್ಗೆ ಹೆಚ್ಚಿನ ಮಾಹಿತಿ ಲಭ್ಯವಾಗಿರುವುದಿಲ್ಲ. ಈತನ ಚರಿತ್ರೆ ೧೫ನೆಯ ಶತಮಾನದವರೆಗೂ ಯಾವುದೇ ಪುರಾಣ-ಕಾವ್ಯಗಳಲ್ಲಿ ಕಂಡುಬರುವುದಿಲ್ಲ. ಶಿವಶರಣ ಕಥಾರತ್ನಕೋಶದಲ್ಲಿ ತ್ರಿಪುರದಹನ ನಂತರ ಗಂಗೆಯು ತನ್ನ ಬಂಜೆತನವನ್ನು ಕಳೆಯುವಂತೆ ಶಿವನನ್ನು ಬೇಡುತ್ತಾಳೆ. ಆಗ ಆತನು ಆಕೆಗೆ ಪುತ್ರೋತ್ಸವವಾಗುವಂತೆ ವರವೀಯುತ್ತಾನೆ. ಹೀಗೆ ಉದಯಿಸಿದ ಶಿವಕಳೆಯೇ ಗಂಗಾಮತದ ಮೂಲಪುರುಷ ಅಂಬಿಗರ ಚೌಡಯ್ಯಾ ಎಂದು ಆತನ ಜನನಕ್ಕೆ ಪೌರಾಣಿಕತೆಯನ್ನು ಕಲ್ಪಿಸಿದೆ. ತೋಂಟದ ಸಿದ್ದಲಿಂಗ ಶಿವಯೋಗಿಗಳ ಶಿಷ್ಯನಾದ ಘನಲಿಂಗದೇವನು (ಕ್ರಿ.ಶ.೧೫೮೦) ತನ್ನ ಒಂದು ವಚನದಲ್ಲಿ

ಡೋಹಾರ ಕಕ್ಕಯ್ಯ ಮಾದಾರ ಚನ್ನಯ್ಯ
ಅಂಬಿಗರ ಚೌಡಯ್ಯ ಯಿಂತಪ್ಪ ಶಿವಶರಣರ
ಮನೆಯ ಬಾಗಿಲಿಕ್ಕುವ ಸೊಣಗನ ಮಾಡಿ
ಎನ್ನನಿರಿಸಯ್ಯಾ ಘನಲಿಂಗ ಡೋಹರ ಚನ್ನಮಲ್ಲಿಕಾರ್ಜುನಾ ಎಂದಿದ್ದಾನೆ.

ನಂತರದಲ್ಲಿ ಸಿದ್ದನಂಜೇಶನ ಗುರುರಾಜ ಚರಿತ್ರ, ನಂಜುಂಡ ಕವಿಯ ಭೈರವೇಶ್ವರ ಕಾವ್ಯ, ಮಹಾಲಿಂಗ ರಂಗನ ಗುರುಭೋಧಾಮೃತ, ಮುಪ್ಪಿನ ಷಡಕ್ಷರಿಯ ಸುಭೋಧಸಾರ

ಉಪನ್ಯಾಸಕರು, ಚಿಂಚೋಳಿ, ತಾ:ಚಿಂಚೋಳಿ ಜಿಲ್ಲೆ: ಕಲಬುರಗಿ
ಮೊ. ೯೮೮೦೪೨೪೮೭೭



ಮೊದಲಾದ ಕಾವ್ಯಗಳಲ್ಲಿ ಹೆಸರು ಪ್ರಸ್ತಾಪಗೊಂಡಿದೆ. ಇನ್ನು ಚೌಡದಾನಪುರ, ಮೈಲಾರ, ಕೆರೆಮಲ್ಲಾಪುರ ಶಾಸನಗಳಲ್ಲಿ ಅಂಬಿಗರ ಚೌಡಯ್ಯನವರ ಹೆಸರು ಉಲ್ಲೇಖವಿದೆ. ಒಟ್ಟಿನಲ್ಲಿ ವಿದ್ವಾಂಸರ ಅಭಿಪ್ರಾಯದಂತೆ ಚೌಡಯ್ಯನವರ ಕಾಲ ಕ್ರಿ.ಶ.೧೧೬೦ ಎಂದು ಇಟ್ಟುಕೊಳ್ಳಬಹುದಾಗಿದೆ. ಇವರ ಜನ್ಮಸ್ಥಳ ರಾಣೆಬೆಣ್ಣೂರು ತಾಲೂಕಿನ ಚೌಡದಾನಪುರವೆಂದು ಪ್ರೊ.ಎಸ್.ಎಸ್.ಭೂಸರೆಡ್ಡಿಯವರು ಹೇಳಿದರೆ, ಶ್ರೀ ಎಸ್. ವಿದ್ಯಾಶಂಕರವರು ಧಾರವಾಡ ಜಿಲ್ಲೆಯ ಶಿವದಾನಪುರ ಅಂಬಿಗರ ಚೌಡಯ್ಯನವರ ಜನ್ಮಸ್ಥಳವೆಂದು ಗುರುತಿಸಿದ್ದಾರೆ.

ವಚನಗಳು: ಕೆಳವರ್ಗದಲ್ಲಿ ಜನಿಸಿದ ಅಂಬಿಗರ ಚೌಡಯ್ಯ ಶರಣ ಸಮುದಾಯದಲ್ಲಿಯೇ ವಿಶಿಷ್ಟ ಗುಣವುಳ್ಳವನು. ಹೆಸರೇ ಸೂಚಿಸುವಂತೆ ಆತನದು ಅಂಬಿಗ ವೃತಿ. ದೋಣಿ ನಡೆಸುವಕಾಯಕ. ವಚನಕಾರರ ಪ್ರಭಾವಕ್ಕೊಳಗಾಗಿ ವಚನ ರಚನೆಯಲ್ಲಿ ತೊಡಗಿದನು. ಇದುವರೆಗೆ ಅಂಬಿಗರ ಚೌಡಯ್ಯನವರ ೨೭೮ ವಚನಗಳು ದೊರೆತಿವೆ. ಈ ವಚನಗಳು ನೇರ, ಕಠೋರ, ಚಾಟಿ ಏಟಿನಂತೆ ಇದ್ದದ್ದನ್ನು ಕಾಣಬಹುದಾಗಿದೆ

ವೃತ್ತಿಗೌರವ: ಬಸವಣ್ಣನವರ ಪ್ರಭಾವಕ್ಕೆ ಒಳಗಾಗಿ ಕಲ್ಯಾಣಕ್ಕೆ ಬಂದು ನೆಲೆನಿಂತ ಚೌಡಯ್ಯನವರು ಕಲ್ಯಾಣದ ತ್ರಿಪುರಾಂತ ಕೆರೆಯಲ್ಲಿ ಅಂಬಿಗ ವೃತಿಯನ್ನು ಕಾಯಕವನ್ನಾಗಿ ಆಯ್ಕೆ ಮಾಡಿಕೊಂಡರು. ಅದೊಂದು ಕೆಳವೃತ್ತಿಯೆಂದು ಅಂದಿನ ಜನ ಭಾವಿಸಿರಬೇಕು. ಅದಕ್ಕೆಂತಲೇ ಆತ;

ಅಂಬಿಗ ಅಂಬಿಗ ಎಂದು ಕುಂದು ನುಡಿಯದಿರು
ನಂಬಿದರೆ ಒಂದೇ ಹುಟ್ಟಲ್ಲಿ
ಕಡೆಯ ಹಾಯಿಸುವನಂಬಿಗರ ಚೌಡಯ್ಯ ಎಂದು ಹೇಳುವುದರ ಮೂಲಕ ವೃತ್ತಿ ಅಭಿಮಾನವನ್ನು ತೋರಿಸಿರುವನು. ಈತನ ಶಕ್ತಿ ಸಾಮರ್ಥ್ಯ ವಿಶಿಷ್ಟವಾದುದು. "ಅಂಬಿಗನು ಜಗದೊಳಗೆ ಇಂಬಿಲೋಲಾಡುವನು ತುಂಬಿದ ಸಾಗರದೊಳಗೆ ನೋಡಯ್ಯ" ಎಂದು ಸಂಸಾರ ಸಾಗರವನ್ನು ದಾಟಿ ಮೋಕ್ಷಸಾಗರದಲ್ಲಿ ತನ್ನ ದೋಣಿ ನಡೆಸುವ ಈ ಧೀರ "ಚಂದ ಗೆಟ್ಟವರೆಲ್ಲ ಬಂದೇರಿ ದೋಣಿಯನು" ಶಿವಪಥದ ಸ್ಥಳಕ್ಕೆ ಸೇರಿಸುತ್ತೇನೆಂದು ಎದೆತಟ್ಟಿ ಹೇಳುತ್ತಾನೆ. ಎಲ್ಲಾ ಅಂಬಿಗರು ಕೆಲಸಕ್ಕೆ ಪ್ರತಿಯಾಗಿ ಕೂಲಿ (ಹಣ) ಕೇಳಿದರೆ ಈತನು "ಹಿಡಿವ ಬಿಡುವ ಮನವ ಬೆಲೆಗೊಟ್ಟೊಡೆ" ಎನ್ನುತ್ತಾನೆ. ಈತನು ಅನುಭಾವಿ, ಒಡಲಿಲ್ಲದ, ಕಾಸಿನ ಆಸೆ ಇಲ್ಲದ, ಆತ್ಮವಿಶ್ವಾಸದ ಅಂಬಿಗನಾಗಿದ್ದಾನೆ. ಸಂಸಾರದ ಹೊಳೆಯನ್ನು ದಾಟಬೇಕಾದರೆ ಚಂಚಲವಾಗಿರುವ ಮನಸ್ಸನ್ನು ಹಿಡಿತದಲ್ಲಿಟ್ಟುಕೊಂಡಾಗ ಮಾತ್ರ ಮೋಕ್ಷಕ್ಕೆ ಹೋಗಲು ಸಾಧ್ಯ ಎನ್ನುತ್ತಾನೆ.

ನಿರ್ಭಿತ ಸ್ವಾಭಾವ: ಅಂಬಿಗರ ಚೌಡಯ್ಯನವರು ಯಾರದೇ ಹಂಗು ಹಾಗೂ ದಾಕ್ಷಿಣ್ಯಕ್ಕೆ ಒಳಗಾದವರಲ್ಲ. ಅವರದು ನೇರ ನುಡಿ, ನುಡಿಯಂತೆ ನಡೆ. ವೇಷ ಡಂಬರವೆಂದರೆ ಅವನಿಗೆ ಆಗುವುದಿಲ್ಲ. ಡಾಂಭಿಕ ಪಟ್ಟದ ಅಯ್ಯಗಳು, ಪರಮ ವಿರಕ್ತರು, ಚರಮೂರ್ತಿಗಳನ್ನು ಆತ ಚಾಟಿ ಬೀಸುತ್ತಾನೆ. ತುತ್ತಿನಾಸೆಗೆ ಲಿಂಗವ ಕಟ್ಟುವ ಗುರುಗಳನ್ನು, ಕಾಮನಾಟಕ್ಕೆ

ಸಿಲುಕಿ ಮಾತಿನಲ್ಲಿ ನೀತಿಯ ಸೇರಿಸುತ್ತಾ ಅಲೆವ ಭಕ್ತರು, ಪೋತರಾಜನಂತೆ ಮಾರು, ಮಾರು ಜಡೆಗಳ ಬಿಟ್ಟು, ಅಡವಿಯೊಳಗಿರುವ ಹೋತಿನಂತೆ ಮೊಳ ಮೊಳ ಗಡ್ಡವ ಬಿಟ್ಟು ಜನರನ್ನು ಮರುಳಗೊಳಿಸುವ, ಕೊಟ್ಟಡೆ ಹೊಗಳುವ, ಕೊಡದಿದ್ದಡೆ ಬೊಗಳುವ ಗುರುಗಳನ್ನು ಅಂಬಿಗರ ಚೌಡಯ್ಯನವರ ತೀಕ್ಷ್ಣ ವಿಮರ್ಶೆಗೆ ಒಳಗಾಗಿದ್ದಾರೆ. ಡಾಂಬಿಕತೆಯಿಂದ ಜನರನ್ನು ಮೋಸ ಮಾಡುವವರನ್ನು ಗುಪ್ತ ಕಾಯಕದ ಶರಣ ಪಡಿಹಾರ ಉತ್ತಣನ'ಎಡಪಾದುಕೆಯಿಂದ ಲಟಲಟನೆ ಹೊಡಿ ಎಂದು ಆಕ್ರೋಶ ವ್ಯಕ್ತಪಡಿಸುತ್ತಾನೆ.

ಕಲ್ಲುದೇವರ ಪೂಜೆಯ ಮಾಡಿ ಕಲಿಯುಗದ ಕತ್ತೆಗಳಾಗಿ ಹುಟ್ಟಿದರು
ಮಣ್ಣುದೇವರ ಪೂಜೆಯ ಮಾಡಿ ಮಾನಹೀನರಾದರು
ಮರನದೇವರೆಂದು ಪೂಜಿಸಿ ಮಣ್ಣುಕೂಡಿದರು

ಜಗದ್ಭರಿತನಾದ ಪರಶಿವನೊಳಗೆ ಕಿಂಕರನಾದ ಶಿವಭಕ್ತನೇ ಶ್ರೇಷ್ಠವೆಂದಾತ ನಮ್ಮ ಅಂಬಿಗರ ಚೌಡಯ್ಯ ಎಂದು ಏಕದೇವೋಪಾಸನೆಯನ್ನು ಪ್ರತಿಪಾದಿಸುತ್ತಾರೆ.

ಕುಲಭೇಧ ಖಂಡನೆ: ೧೨ನೇ ಶತಮಾನದಲ್ಲಿದ್ದ ಜಾತಿಪದ್ಧತಿಯನ್ನು ಅಂಬಿಗರ ಚೌಡಯ್ಯನವರು ತಮ್ಮ ವಚನಗಳ ಮೂಲಕ ಖಚಿತಪಡಿಸುತ್ತಾರೆ. ಜಾತಿ ವ್ಯವಸ್ಥೆಯನ್ನು ಪೋಷಿಸುವವರಿಗೆ ಎಚ್ಚರಿಕೆಯ ಘಂಟೆ ಭಾರಿಸುತ್ತಾರೆ.

ಕುರಿ, ಕೋಳಿ, ಕಿರುಮೀನ ತಿಂಬುವರ
ಊರೊಳಗೆ ಇರು ಎಂಬರು
ಅಮೃತಾನ್ನವ ಕರೆವ ಗೋವ ತಿಂಬುವರ

ಊರಿಂದ ಹೊರಗಿರಿ ಎಂಬರು.....ಎಂಬ ವಚನದ ಮೂಲಕ ಆಹಾರ ಪದ್ಧತಿಯಲ್ಲೂ ತಾರತಮ್ಯ ಮಾಡುವವರನ್ನು ಹಂಗಿಸುತ್ತಾರೆ.

ಬುದ್ದಲಿಕೆಯೊಳಗಣ ಶುದ್ಧತುಪ್ಪವ ಶುದ್ಧ ಮಾಡಿಗುಜ್ಯ ಹೊಲೆಯರು ಎಂಬ ಮಾತು ನೋಡಿದಾಗ ಜಾತಿವ್ಯವಸ್ಥೆಯ ಬಗೆಗಿನ ನೈತಿಕ ಆಕ್ರೋಶ ವ್ಯಕ್ತವಾಗುತ್ತದೆ.

ಅಂದಿನ ಕಾಲದ ಸಾಮಾಜಿಕ ಅಸಮಾನತೆ, ಮೇಲು-ಕೀಳು ಭಾವನೆಯನ್ನು ತಮ್ಮ ವಚನದ ಮೂಲಕ ಅಂಬಿಗರ ಚೌಡಯ್ಯನವರು ತೀವ್ರವಾಗಿ ಖಚಿತಪಡಿಸುತ್ತಾರೆ.

ಉಚ್ಚೆಯ ಬಚ್ಚಲಲ್ಲಿ ಹುಟ್ಟಿ
ನಾ ಹೆಚ್ಚು, ನೀ ಹೆಚ್ಚು ಎಂಬುವವರನ್ನು
ಬಚ್ಚಲಿಗೆ ಕರೆತಂದು

ಕಚ್ಚೆಯನ್ನು ಬಿಚ್ಚಿ ಮಚ್ಚಿಲಿ ಹೊಡಿ ಎಂದಾತ ನಮ್ಮ ಅಂಬಿಗರ ಚೌಡಯ್ಯ ಎಂಬ ವಚನವು ಅಂದಿನ ಸಾಮಾಜಿಕ ವ್ಯವಸ್ಥೆಗೆ ಚಾಟಿ ಕೊಟ್ಟಂತಿದೆ. ಇನ್ನೊಂದು ವಚನದಲ್ಲಿ ಚೌಡಯ್ಯನವರು ಜಾತಿ ಹೆಸರಿನಲ್ಲಿ ಶೋಷಣೆ ಮಾಡುವವರಿಗೆ ಚಾಟಿ ಬೀಸುತ್ತಾರೆ.

ನನ್ನ ಕುಲ ಶ್ರೇಷ್ಠ, ನಿನ್ನ ಕುಲ ಕನಿಷ್ಠ ಎಂದು
ಹೊಡೆದಾಡುವ ಅಣ್ಣಗಳನ್ನು ತಂದು





ಮೂಗನೆ ಸವರಿ
ಮೆಣಸಿನ ಹಿಟ್ಟುತುಪ್ಪವ ತುಂಬಿ
ನಮ್ಮ ಪಡಿಹಾರಿ ಉತ್ತಣನ ವಾಮ ಪಾದುಕೆಯಿಂದ
ಘಡಘಡನೆ ಹೊಡಿ ಎಂದಾತ ಅಂಬಿಗರ ಚೌಡಯ್ಯ ಎಂದು ಕಿಡಿ ಕಾರುತ್ತಾರೆ.

ಹುಟ್ಟುತ್ತಲೇ ಯಾರು ಜಾತಿಯನ್ನು ಹಣೆಗೆ ಅಂಟಿಸಿಕೊಂಡು ಬಂದಿಲ್ಲ. ಆಕಸ್ಮಿಕವಾಗಿ ಒಂದು ಜಾತಿಯಲ್ಲಿ ಮನುಷ್ಯ ಜನಿಸುತ್ತಾನೆ. ಆದರೆ ಅದೇ ಆಧಾರವಾಗಿಟ್ಟುಕೊಂಡು ಕನಿಷ್ಠ ಜಾತಿಯವನೆಂದು ಮುಟ್ಟುತಟ್ಟು ಮಾಡುವವರನ್ನು ಅಂಬಿಗರ ಚೌಡಯ್ಯನವರು ಪ್ರಶ್ನಿಸುತ್ತಾರೆ. ಹೊಲೆಯ ಎಂಬುದು ಜಾತಿ ಸೂಚಕ ಪದವಲ್ಲ. ಅದು ಗುಣ ಸೂಚಕ ಪದವಾಗಿದೆ. ಯಾರು ಹೊಲೆಯಾ? ಊರ ಹೊರಗೆ ವಾಸಿಸುವವನು ಹೊಲೆಯನೆ? ಕೆಳ ಜಾತಿಯಲ್ಲಿ ಹುಟ್ಟಿದವನು ಹೊಲೆಯನೇ? ಅಲ್ಲ ಎನ್ನುತ್ತಾರೆ ಅಂಬಿಗರ ಚೌಡಯ್ಯನವರು. ಉತ್ತಮ ಕುಲದಲ್ಲಿ ಹುಟ್ಟಿ ಕನಿಷ್ಠ ಗುಣವುಳ್ಳವನೇ ಹೊಲೆಯ ಎಂದು ಅವರು ಪ್ರತಿಪಾದಿಸುತ್ತಾರೆ.

ಹೊಲೆಯ ಹೊಲೆಯ ಎಂದಡೆ ಹೊಲೆಯರೆಂತಪ್ಪರಯ್ಯಾ
ಹೊಲೆಯ ಹೊರಕೇರಿಯಲ್ಲಿರುವವನೇ?
ಊರೊಳಗಿಲ್ಲವೇ ಹೊಲೆಯ?
ತಾಯಿಗೆ ಬೈದವನೇ ಹೊಲೆಯ, ತಂದೆಯ ಮಾತಿಗೆದುರಾಡುವವನೆ ಹೊಲೆಯ
ಕೊಡುವ ದಾನಕ್ಕೆ ಅಡ್ಡ ಬಂದವನೇ ಹೊಲೆಯ
ನಡೆವದಾರಿಗೆ ಮುಳ್ಳು ಹಚ್ಚಿದವನೇ ಹೊಲೆಯ
ಹತ್ತು ಆಡಿದರೆ ಒಂದು ನಿಜವಿಲ್ಲದವನು ಹೊಲೆಯ
ಚಿತ್ತದಲ್ಲಿ ಪರಸತಿಯ ಬಯಸಿದವನೇ ಹೊಲೆಯ
ಇಂತಪ್ಪ ಹೊಲೆಯರು ಊರ ತುಂಬ ಇರಲಾಗಿ
ಹೊರಕೇರಿಯವರಿಗೆ ಹೊಲೆಯರೆನ್ನಬಹುದೆ
ಅಲ್ಲಲ್ಲ ಎಂದ ನಮ್ಮ ಅಂಬಿಗರ ಚೌಡಯ್ಯಾ

ಬಸವಾದಿ ಶರಣರು ಆಚಾರ, ನಡತೆಗೆ ಮಹತ್ವ ಕೊಟ್ಟರೇ ಹೊರತು ಜಾತಿಗಲ್ಲ. ಶೀಲವಂತರು ಶೀಲವಂತರು ಎಂದು ಆಚರಿಸುವ ಅಣ್ಣಂದಿರೇ, ನಿಮ್ಮ ಶೀಲವಾವಿದು ಹೇಳಿರೋ ಎಂದು ಕಡುನುಡಿಯಿಂದ ಅಂಬಿಗರ ಚೌಡಯ್ಯನವರು ಪ್ರಶ್ನಿಸುತ್ತಾರೆ.

ಡಂಬಡ ವೈರಿ: ಅಂಬಿಗರ ಚೌಡಯ್ಯನವರು ಡಾಂಭಿಕತೆಯ ಕಡು ವಿರೋಧಿಗಳು. ಅಂದಿನ ಕಾಲದಲ್ಲಿ ಗುರು ದೀಕ್ಷೆಯಿಂದ ಮುಕ್ತಿ ಸಿಗುತ್ತದೆ, ಬೇಧಗಳೆಲ್ಲಾ ಹೋಗುತ್ತವೆ ಎಂಬ ನಂಬಿಕೆ ಇತ್ತು. ಕನಿಷ್ಠ ಕುಲದ ಭಕ್ತರ ಮನೆಗೆ ಜಂಗಮರು ಬರುತ್ತಿರಲಿಲ್ಲ. ಬಂದರೂ ಅವರು ಅವರನ್ನು ಮುಟ್ಟಿಸಿಕೊಳ್ಳುತ್ತಿರಲ್ಲಿಲ್ಲ. ಅವರ ಮನೆಯಲ್ಲಿ ಊಟ ಮಾಡುತ್ತಿರಲಿಲ್ಲ. ಆದರೆ ಅವರ ಮನೆಯ ದವಸ-ಧಾನ್ಯಗಳನ್ನು, ಕಾಣಿಕೆ ತೆಗೆದುಕೊಂಡು ಹೋಗುತ್ತಿದ್ದರು. ಇದನ್ನು ಅಂಬಿಗರ ಚೌಡಯ್ಯನವರ ತಮ್ಮ ವಚನದಲ್ಲಿ ಖಚಿತಪಡಿಸುತ್ತಾರೆ.

'ಕುಲ ಹೀನ ಶಿಷ್ಯಂಗೆ ಅನುಗ್ರಹವ ಮಾಡಿ
ತಿರುಗಿ ಅವನ ಮನೆಯಲ್ಲಿ ಉಣಬಾರದೆಂದು
ಅಕ್ಕಿ ಕಣಕವ ಕೊಂಡು ಹೋಗುವ ಗುರುವಿನ ಕಂಡಡೆ
ಕೆಡವಿ ಹಾಕಿ, ಮೂಗನೇ ಕೊಯ್ದು
ಇಟ್ಟಂಗಿ ಕಲ್ಲಲ್ಲಿ ತಿಕ್ಕಿ ಸಾಸಿವೆ ಹಿಟ್ಟನ್ನು ತುಂಬಿ
ಮೇಲೆ ನಿಂಬೆಯ ಹುಳಿಯನ್ನು ಹಿಂಡಿ
ಪಡುವನ ಗಾಳಿಗೆ ಹಿಡಿ ಎಂದಾತ ಅಂಬಿಗರ ಚೌಡಯ್ಯಾ.

೧೨ನೇ ಶತಮಾನದಲ್ಲಿ ಆಚರಣೆಯಲ್ಲಿದ್ದ ಹಲವು ಅನಿಷ್ಟ ಸಂಪ್ರದಾಯಗಳನ್ನು ಅಂಬಿಗರ ಚೌಡಯ್ಯ ವಿರೋಧಿಸುತ್ತಾನೆ. ಡಾಂಭಿಕ ಭಕ್ತಿ, ಅಸ್ಪೃಶ್ಯರನ್ನು ಶೋಷಿಸುವ ವ್ಯವಸ್ಥೆ, ಬಡವರ ದುಡಿಮೆಯ ಮೇಲೆ ಬದುಕುವ ಶ್ರೀಮಂತರ ವರ್ಗ ಇಂಥವರ ನೀಚತನ ಖಚಿತಪಡಿಸುತ್ತಾರೆ.

ಯಾರೋ ಬಿತ್ತಿದ ಗಿಡದ ಹೂವ ತಂದು
ಊರೆಲ್ಲರೂ ಕಟ್ಟಿಸಿದ ಕೆರೆಯ ನೀರು ತಂದು
ನಾಡೆಲ್ಲರೂ ನೋಡೆಂದು ಪೂಜಿಸುತ್ತಾ
ಪೂಜಿಸಿದ ಪುಣ್ಯ ಹೂವಿಗೋ, ನೀರಿಗೋ, ನಾಡೆಲ್ಲಕ್ಕೋ, ಪೂಜಿಸಿದಾತಗೋ?
ಇದನಾನರಿಯೇ ನೀ ಹೇಳೆಂದ ಅಂಬಿಗರ ಚೌಡಯ್ಯ.

ನಿಸರ್ಗದ ಹೂವು, ನೀರು ತಂದು ಕಲ್ಲದೇವರನ್ನು ಪೂಜಿಸುತ್ತಾ ಮಂದಿಗೆ ಮರುಳು ಮಾಡುವ ಪರಿಯನ್ನು ಚೌಡಯ್ಯನವರು ಖಚಿತಪಡಿಸುತ್ತಾರೆ.

ಗಾಳಿ ಬಿಟ್ಟಾಗ ತೂರಿಕೊಳ್ಳಿರಯ್ಯಾ ಗಾಳಿ ನಿನ್ನಧೀನವಲ್ಲಯ್ಯಾ
ನಾಳೆ ತೂರಿಹೆನೆಂದರೆ ಇಲ್ಲಯ್ಯಾ
ಶಿವಶರಣ ಎಂಬುದೊಂದು ಗಾಳಿ
ಹಡದಲ್ಲಿ ತೂಗೆಂದ ನಮ್ಮ ಅಂಬಿಗರ ಚೌಡಯ್ಯ.

ಹೊರಗೆ ಗಾಳಿ ಬಿಟ್ಟಾಗ ತೂರುವುದು ಸಹಜ. ಒಳಗೆ ಗಾಳಿಯಿರುವಾಗಲೇ ಅಂದರೆ ಜೀವ ಇರುವಾಗಲೇ ಹುಟ್ಟಿನ ಹೊಟ್ಟುತೂರಿ ಮುಕ್ತಿಯ ರಾಶಿ ಮಾಡಿಕೊಳ್ಳಬೇಕೆಂಬುದು ಚೌಡಯ್ಯನವರ ಆಶಯ. ಅಂಬಿಗರ ಚೌಡಯ್ಯನವರು ವೃತಿಯಿಂದ ಅಂಬಿಗನಾದರೂ ಪ್ರವೃತಿಯಿಂದ ಕ್ಷತ್ರಿಯನಂತೆ. ಮುಚ್ಚು ಮರೆಯಿಲ್ಲದ ಬಿಚ್ಚು ಮನಸ್ಸು ಅವರದು. ಸತ್ಯದರ್ಶನವೇ ಅವರ ಮೂಲ ಉದ್ದೇಶವಾಗಿತ್ತು

ಬಡತನಕ್ಕೆ ಉಂಬುವ ಚಿಂತೆ, ಉಣಲಾದರೆ ಉಡುವ ಚಿಂತೆ
ಉಡಲಾದರೆ ಹೆಂಡಿರ ಚಿಂತೆ, ಹೆಂಡಿರಾದರೆ ಮಕ್ಕಳ ಚಿಂತೆ.....

ಹೀಗೆ ಹಲವು ಚಿಂತೆಯಲ್ಲಿರುವವರೇ ಬಹುತೇಕ ಜನ. ಆದರೆ ಶಿವನ ಚಿಂತೆ, ಸತ್ಯದ ನಿಲುವಿನಲ್ಲಿರುವವರು ಅಪರೂಪ ಎಂದು ಅಂದಿನ ಜನರ ಬದುಕಿನ ಮೇಲೆ





ವಚನದ ಮೂಲಕ ಬೆಳಕು ಚೆಲ್ಲಿದರು.

ಗುರು ಎಂದರೆ ಹೇಗಿರಬೇಕು?

ಪ್ರತಿಯೊಬ್ಬ ಮನುಷ್ಯನ ಜೀವನದಲ್ಲಿ ಗುರುವಿನ ಪಾತ್ರ ಅಪಾರವಾದುದು. ಆದರೆ ಗುರು ಆದವನು ಹೇಗಿರಬೇಕು? ಕಾವಿ ತೊಟ್ಟವರೆಲ್ಲ ಗುರುಗಳೇ? ಲಿಂಗ ಧರಿಸಿ, ಹಣೆಗೆ ಭಸ್ಮ ಧರಿಸದವರು ಗುರುಗಳೇ?

ಇದಕ್ಕೆ ಅಂಬಿಗರ ಚೌಡಯ್ಯನವರು ತಮ್ಮ ವಚನದ ಮೂಲಕ ಉತ್ತರ ಕೊಟ್ಟಿದ್ದಾರೆ.

"ತುತ್ತಿನಾಸೆಗೆ ಲಿಂಗವ ಕೊಟ್ಟು ಹೋದ ವ್ಯರ್ಥ ಮೂಳ ನಿಮಗೆ ಗುರುವಾಗುವನೇ? ಎಂದು ಪ್ರಶ್ನಿಸುತ್ತಾರೆ. ಅಡ್ಡಬಿದ್ದು ಶಿಷ್ಯನ ಮಾಡಿಕೊಂಬ ದಡ್ಡ ಪ್ರಾಣಿಗಳೆನೆಂಬೆ, ಏನೇನು ಅರಿಯದ ಎಡ್ಡ ಮಾನವರಿಗೆ ಉಪದೇಶವ ಮಾಡುವ ಗೊಡ್ಡ ಮಾನವರ ಮುಖ ತೋರಿಸದಿರಯ್ಯಾ ಇಂತಹ ಗುರು ಶಿಷ್ಯರಿಬ್ಬರೂ ಅಜ್ಞಾನ್ನಿಗಳು ಅವರು ಇಹಲೋಕ ಪರಲೋಕಕ್ಕೆ ಹೊರಗೆಂದಾತ ಅಂಬಿಗರ ಚೌಡಯ್ಯಾ" ಎಂದು ಸಾರುವುದರ ಮೂಲಕ ಗುರುವಾದವನು ನಡೆ-ನುಡಿ ಶುದ್ಧವಾಗಿರಬೇಕು. ಶಿಷ್ಯನಾದವನು ಸತ್ಯಶುದ್ಧ ಕಾಯಕ ಮಾಡುತ್ತಾ ಗುರು ಭಕ್ತಿಮೆರೆಯಬೇಕೆಂದು ಹೇಳುತ್ತಾರೆ.

ಏಕದೇವೋಪಾಸನೆ ಪ್ರತಿಪಾದಕ:

೧೨ನೇ ಶತಮಾನದವ ಶರಣರು ಏಕದೇವೋಪಾಸನೆ ಪ್ರತಿಪಾದಿಸಿದರು. ಅದರಂತೆ ಅಂಬಿಗರ ಚೌಡಯ್ಯನವರು ಏಕದೇವೋಪಾಸನೆಯ ಪ್ರಬಲ ಪ್ರತಿಪಾದಕರು. ಅವರ ಒಂದು ವಚನ ಹೀಗಿದೆ.

ಗಂಡಲೆಂಜಲಿಗೆ ಹೇಸುವಳು ಮಿಂಡನ ತಂಬುಲವ ತಿನ್ನವತೆರನಂತೆ
ಗುರುವಿನುಪದೇಶವ ಕೊಂಡು, ಅನೀತಿ ದೇವರುಗಳ ಎಡೆಯ ತಿನ್ನುವಂತಹ
ನೀವು ಕೇಳಿರೋ ಮೈಲಾರ, ಬೀರ, ಭೈರವ, ಧೂಳ, ಕೇತನೆಂಬ
ಕಿರಿದೈವಕ್ಕೆರಗಿ ಭಕ್ತರೆನಿಸಿಕೊಂಬುವ
ಚಂಡಿನಾಯಿಗಳ ಕಂಡು ಮನ ಹೆಸಿತೆಂದಾ ನಮ್ಮ ಅಂಬಿಗರಚೌಡಯ್ಯ

ಇನ್ನೊಂದು ವಚನದಲ್ಲಿ

ಕಟ್ಟಿದ ಲಿಂಗವ ಬಿಟ್ಟು, ಬೆಟ್ಟದ ಲಿಂಗಕ್ಕೆ ಎರಗುವರನ್ನು
ಪಡಿಹಾರ ಉತ್ತಣ್ಣನ ಎಡಪಾದುಕೆಯಿಂದ ಲಟಲಟನೆ ಹೊಡಿ ಎಂದು ಆಕ್ರೋಶ ವ್ಯಕ್ತಪಡಿಸುತ್ತಾರೆ. ಹೀಗೆ ಅಂಬಿಗರ ಚೌಡಯ್ಯನವರದು ಶರಣ ಸತಿ, ಲಿಂಗ ಪತಿ ಭಾವವಾಗಿತ್ತೆಂಬುದು ಅವರ ವಚನಗಳಿಂದ ವ್ಯಕ್ತವಾಗುತ್ತದೆ.

ಮನಮೆಚ್ಚುವಂತೆ ನಡೆ: ಮನುಷ್ಯ ಜಗವನ್ನು ಮೆಚ್ಚಿಸಲು ಸಾಧ್ಯವೇ ಇಲ್ಲ. ಅದಕ್ಕಾಗಿ ಮನ ಮೆಚ್ಚುವಂತೆ ನಡೆಯಬೇಕೆಂದು ಚೌಡಯ್ಯನವರು ಹೇಳುತ್ತಾರೆ.

"ಉಂಡರೆ ಭೂತನೆಂಬರು, ಉಣದಿದ್ದರೆ ಚಕೋರನೆಂಬರು
ಭೋಗಿಸಿದರೆ ಕಾಮಿ ಎಂಬರು, ಭೋಗಿಸದಿದ್ದರೆ ಮುನ್ನ ಮಾಡಿದ ಕರ್ಮಿ ಎಂಬರು

ಊರೊಳಗಿದ್ದರೆ ಸಂಸಾರಿ ಎಂಬರು, ಅಡವಿಯೊಳಗಿದ್ದರೆ ಮೃಗಜಾತಿ ಎಂಬರು
ಎದ್ದಿದ್ದರೆ ಚಕೋರನೆಂಬರು, ನಿದ್ರೆಗೈದರೆ ಜಡದೇಹಿಯೆಂಬರು
ಇಂತಿ ಜನ ಮೆಚ್ಚಿ ನಡೆದವರ ಎಡದ ಪಾದದ ಕಿರಗಣಿಯಲ್ಲಿ ಮನೆ ಮಾಡು ಎಂದಾತ ನಮ್ಮ ಅಂಬಿಗರ ಚೌಡಯ್ಯಾ". ನಾವು ಜನ ಮೆಚ್ಚಿಸಲಿಕ್ಕಾಗಿ ಕೆಲಸ ಮಾಡುವುದಕ್ಕಿಂತ ಮನ ಮೆಚ್ಚುವಂತೆ ಕೆಲಸ ಮಾಡಬೇಕು ಎಂಬುದು ಚೌಡಯ್ಯನವರ ನಿಲುವಾಗಿದೆ.

ಅಂಬಿಗರ ಚೌಡಯ್ಯನವರು ಅಲ್ಲಮಪ್ರಭುಗಳಂತೆ ತಮ್ಮ ಬೆಡಗಿನ ವಚನಗಳ ಮೂಲಕ ಮನೆ ಮಾತಾಗಿದ್ದಾರೆ. ಅವರ ಒಂದು ಬೆಡಗಿನ ವಚನ ಹೀಗಿದೆ.

"ಕೋಣನ ಕೊಂಬಿನ ಮೇಲೆ ಕಠೋರವೆಂಬ ಪಟ್ಟಣ
ಆ ಪಟ್ಟಣದಲ್ಲಿ ಹಾಯ್ ಹಾಯ್ ಎಂಬ ಗೌಡ
ಹೊಯ್ ಹೊಯ್ ಎಂಬ ಕುಲಕರ್ಣಿ
ಮೆಯ್ ಮೆಯ್ ಎಂಬ ತಳವಾರ
ಆ ತಳವಾರನ ಹೆಂಡತಿಯು ತಳವಿಲ್ಲದ ಕೊಡವನ್ನು ಹೊತ್ತುಕೊಂಡು
ಜಲವಿಲ್ಲದ ಭಾವಿಗೆ ನೀರಿಗೆ ಹಾರಿದಳು
ಆ ಭಾವಿಯ ದಡದ ಮೇಲೆ ಬೇರಿಲ್ಲದ ಬೇವಿನ ಮರವು ಹುಟ್ಟಿತು
ಅದರ ಮೇಲೆ ಪಕ್ಕವಿಲ್ಲದ ಪಕ್ಷಿಯು ಕುಂತಿತು
ಅದನ್ನು ಕಣ್ಣಿಲ್ಲದವನು ನೋಡಿ, ಕೈಯಿಲ್ಲದವನ ಮುಂದೆ ಹೇಳಿದನು
ಕೈಯಿಲ್ಲದವನು ತುದಿಯಿಲ್ಲದ ಬಾಣವನ್ನು ಹೂಡಿ ಹೊಡೆಯಲು
ಆ ಪಕ್ಷಿ ಬಿತ್ತೋ, ಬೀಳಲಿಲ್ಲೋ ಎಂದಾತ ನಮ್ಮ ಅಂಬಿಗರ ಚೌಡಯ್ಯ".

ಇಂತಹ ಬೆಡಗಿನ ವಚನಗಳ ಮೂಲಕ ಅಂಬಿಗರ ಚೌಡಯ್ಯನವರು ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ.

ಒಟ್ಟಿನಲ್ಲಿ ಬಂಡಾಯದ ಮನೋಭಾವದ ಅಂಬಿಗರ ಚೌಡಯ್ಯನವರು ೧೨ನೇ ಶತಮಾನದ ಬಂಡಾಯ ಸಾಹಿತಿ. ೮೦೦ ವರ್ಷಗಳ ಹಿಂದೆ ಇಷ್ಟೊಂದು ವೈಜ್ಞಾನಿಕವಾಗಿ, ವೈಚಾರಿಕವಾಗಿ ವಚನಗಳ ರಚಿಸುವುದರ ಮೂಲಕ, ಅಂದಿನ ಕಂದಾಚಾರಗಳಿಗೆ ವಚನಗಳ ಮೂಲಕ ಪ್ರತಿರೋಧ ವ್ಯಕ್ತಪಡಿಸುತ್ತಾರೆ. ಅಂಬಿಗರ ಚೌಡಯ್ಯನವರ ವಚನಗಳು ಕಠೋರವೆನಿಸಿದರೂ, ಅವು ಅದರಕ್ಕೆ ಕಹಿಯಾದರೂ ಉದರಕ್ಕೆ ಸಿಹಿಯಾಗಿವೆ. ಚೌಡಯ್ಯನವರ ವಚನಗಳಲ್ಲಿ ಸಾಮಾಜಿಕ ಕಳಕಳಿಯಿದೆ. ಬದಲಾವಣೆ ಬಯಸುವ ಪ್ರತಿರೋಧವಿದೆ. ಅವರ ವಚನಗಳ ಅಧ್ಯಯನದಿಂದ ಜೀವನದ ಸತ್ಯದರ್ಶನವಾಗುತ್ತದೆ.







## ಅರಿವೆಂಬ ಅನಂತ (ಅಪ್ರಮೇಯ)

**ಸುಶೀಲಾ ಸದಾಶಿವಯ್ಯ**

೧೨ನೇ ಶತಮಾನದಲ್ಲಿ ರಚನೆಯಾದಂತಹ ಶರಣ ಸಾಹಿತ್ಯದ ಸುವರ್ಣ ಪುಟಗಳಲ್ಲಿ ಭಾಷಾ ಪ್ರಯೋಗದ ಸರಳತೆಯೇ ಬಹುಪ್ರಮುಖವಾದದ್ದು ಮತ್ತು ವಿಶಿಷ್ಟವಾದದ್ದು. ವಿದ್ವಾಂಸರು ಮತ್ತು ರಾಜಾಶ್ರಯಕ್ಕಷ್ಟೇ ಸೀಮಿತವಾಗಿದ್ದ ಭಾಷೆಯು ತನ್ನ ಕಠಿಣತೆಯನ್ನು ಕಳೆದುಕೊಂಡು, ಜನಸಾಮಾನ್ಯರ ದಿನನಿತ್ಯದ ಸರಳ ಭಾಷೆಯಲ್ಲಿ ಸಾಹಿತ್ಯ ರಚನೆಯಾಗಿ, ಅದಕ್ಕೆ ಮನ್ನಣೆ ಸಿಕ್ಕಿದ್ದು ವಚನ ಕ್ರಾಂತಿಯ ವಿಶೇಷ. ಒಬ್ಬರ ಅನುಭವ, ಇನ್ನೊಬ್ಬರ ಅನುಭವವೂ ಆಗಿ ಜನ ಮನ್ನಣೆಗಳಿಸಬೇಕೆಂದರೆ ಅದು ಭಾಷೆಯ ಸರಳತೆ, ಸುಭಗತೆಯಿಂದ ಮಾತ್ರ ಸಾಧ್ಯವಾಗುವಂತದ್ದು. ಭಾಷೆ ಹೆಚ್ಚು ಸರಳವಾದಷ್ಟು ಅದು ಓದುಗರ ಹೃದಯವನ್ನು ತಲುಪುವಲ್ಲಿ ಯಶಸ್ವಿಯಾಗುತ್ತದೆ. ವಚನ ಸಾಹಿತ್ಯದ ಸರಳ, ಅಚ್ಚಗನ್ನಡದ ಭಾಷಾ ಪದ ಪ್ರಯೋಗ ಸಾಮಾನ್ಯರನ್ನು ಆಕರ್ಷಿಸಿದಂತೆಯೇ ಪಂಡಿತ ಪಾಮರರ ಮೆಚ್ಚುಗೆಯನ್ನು ಪಡೆದುಕೊಂಡಿತು. ಆಧ್ಯಾತ್ಮದಂತಹ ಗಹನ ವಿಚಾರಗಳು ಸರಳವಾಗಿ ಜನರ ಮನಸ್ಸನ್ನು ತಲುಪಿ ಅವರೂ ಸಹ ಸಾಹಿತ್ಯ ರಚನೆಮಾಡಿ ತಮ್ಮ ಅನುಭವವನ್ನು ಅನುಭಾವವಾಗಿಸುವಲ್ಲಿ ಸಫಲತೆ ಕಂಡರು.

ಕಲ್ಯಾಣ ಕ್ರಾಂತಿಯ ಮೂಲ ಆಶಯಗಳು, ತತ್ತ್ವಸಿದ್ಧಾಂತಗಳು ಎಲ್ಲಾ ವರ್ಗದ ಜನರನ್ನು ಆಕರ್ಷಿಸಿ, ಸಾಮಾನ್ಯರೂ ಚಳುವಳಿಯಲ್ಲಿ ಭಾಗಿಯಾಗಿ ಅದರ ಯಶಸ್ಸಿಗೆ ಕಾರಣರಾದರು. ಎಲ್ಲಾ ವರ್ಗದವರಿಗೆ ಸಮಾನ ಅವಕಾಶಗಳ ಜೊತೆಗೆ, ಅಕ್ಷರ ಜ್ಞಾನ, ತಮ್ಮ ಅನುಭಾವನ್ನು ಸರಳ ಕನ್ನಡದಲ್ಲಿ ನಿವೇದನೆ, ಸ್ತ್ರೀಗೆ ಆಧ್ಯಾತ್ಮದಂತಹ ಶ್ರೇಷ್ಠ ಚಿಂತನೆಗೂ ಮುಕ್ತ ಅವಕಾಶ ಒದಗಿಬಂದದ್ದು ಒಂದು ವಿಶೇಷ. ಅಂದು ಬಳಕೆಯಾದ ಸರಳ ಭಾಷೆಯ ಅಚ್ಚಗನ್ನಡ ಪದಗಳ ಬಳಕೆ ನೇರ, ಸುಂದರ, ಪ್ರಾಜ್ವಲ ಭಾಷೆಯಾಗಿ, ಶರಣರ ಅನುಭಾವವನ್ನು ವಿಶಾಲ ಅರ್ಥವಂತಿಕೆಯಲ್ಲಿ ಕಟ್ಟಿಕೊಟ್ಟು, ಪದಗಳ ಗಾಂಭೀರ್ಯದ ತೂಕವನ್ನು, ಘನತೆಯನ್ನು ಹೆಚ್ಚುಮಾಡಿತು. ವಚನಕಾರರು ಪ್ರಯೋಗಿಸಿದ ಪದಗಳಿಗೆ ನಿರ್ದಿಷ್ಟ ಅರ್ಥವಿದ್ದರೂ ಇನ್ನೂ ಏನನ್ನೂ ಅನೂಹ್ಯವಾಗಿ ಸ್ಫುರಿಸುವಂತಹ, ಧ್ವನಿಸುವ ಗುಣಗಳನ್ನು ಹೊಂದಿರುವುದೇ ಆ ಪದಗಳ ವಿಶಿಷ್ಟತೆಯಾಗಿತ್ತು. ಆ ಸಂದರ್ಭಕ್ಕೆ ಆ ಪದಗಳು ಬಳಕೆಯ ವಿಶೇಷತೆಯನ್ನು ಪಡೆಯಿತು. ಉದಾಹರಣೆಗೆ– ಕಾಯಕ, ಅರಿವು, ದಾಸೋಹ, ಅನುಭಾವ, ಬಯಲು,

'ಪ್ರಣವಂ' ಟೂಡಾ ಕಛೇರಿಯ ಹಿಂಭಾಗ, ೧ ಬ್ಲಾಕ್ ೩ ಮೈನ್
ಕುವೆಂಪು ನಗರ, ತುಮಕೂರು-೫೭೨೧೦೩ ಮೊ.೭೦೧೯೮೪೩೭೭೬

ಶರಣ, ಲಿಂಗಾಂಗ ಸಾಮರಸ್ಯ, ವಚನ, ನಿಜೈಕ್ಯ, ಪ್ರಸಾದ, ನುಡಿ ಇಂತಹ ಹಲವಾರು ಪದಗಳು ವಿಶೇಷ ಅರ್ಥವಂತಿಕೆಯಿಂದ ಶರಣರ ಅನುಭಾವದ ಆಶಯಕ್ಕೆ ವಿಸ್ತರಿಸಿಕೊಳ್ಳುತ್ತಾ ಅದಕ್ಕೆ ಮೌಲ್ಯವನ್ನು, ಹಿರಿಮೆಯನ್ನು ತಂದುಕೊಟ್ಟಿತು. ಶರಣ ಯುಗದಲ್ಲಿ ವ್ಯಕ್ತಿ, ಭಾಷೆ, ಸಮಾಜ ಎಲ್ಲವೂ ಉನ್ನತಿಯನ್ನು ಪಡೆದು ಸಾಮಾನ್ಯವಾದದ್ದೆಲ್ಲಾ–ಅಸಾಮಾನ್ಯವಾಯಿತು. ಕನಿಷ್ಠವೆಲ್ಲಾ ಶ್ರೇಷ್ಠವಾಯಿತು. ಜ್ಞಾನದ ಹೊಳಪು ಬೆಳಕಿನ ತೇಜೋರಾಶಿಯಾಯಿತು. ಶರಣರ ಸಾಮಾಜಿಕ ಆಂದೋಲನ ಗ್ರಹಿಕೆಯ ಸಾಮರ್ಥ್ಯವನ್ನು ಗಹನತೆಯಲ್ಲಿ ವಿಸ್ತರಿಸಿ, ವಿನಯವಂತಿಕೆ, ಸತ್ಯಶೀಲ, ಸರಳತೆ, ನಡೆ–ನುಡಿ ಸಿದ್ಧಾಂತಗಳು ಪದಗಳ ಅರ್ಥದಲ್ಲಿ ಮೈತುಂಬಿಕೊಂಡು ಶರಣರ ಬದುಕಿನ ಸಾಕ್ಷಿ ಪ್ರಜ್ಞೆಯಾದವು.

ಶರಣರು ಬಳಸಿದ ವಿಶಿಷ್ಟ ಪದಗಳಲ್ಲಿ 'ಅರಿವು' ಎಂಬ ಪದಪ್ರಯೋಗವು ವಿಶೇಷವಾದದ್ದು. 'ಅರಿವು' ಎಂಬ ಪದಕ್ಕೆ ನಿಘಂಟಿನಲ್ಲಿ ತಿಳುವಳಿಕೆ, ಜ್ಞಾನ, ಎಚ್ಚರ, ಪ್ರಜ್ಞೆ, ಎಂಬೆಲ್ಲಾ ಅರ್ಥಗಳಿವೆ. ಈ ಎಲ್ಲಾ ಪದಗಳ ಅರ್ಥವನ್ನು ಒಟ್ಟುಗೂಡಿಸಿದ ಸೂಕ್ಷ್ಮ ಜ್ಞಾನದ ವಿಸ್ತಾರದ ಸಂವೇದನಾ ಅನುಭಾವವೇ 'ಅರಿವು'.

ಶರಣರ ಸರಳ ಜೀವನದ ಉನ್ನತ ಮೌಲ್ಯಗಳು, ಚಿಂತನೆಗಳು, ವೈಚಾರಿಕ ಪ್ರಜ್ಞೆ ಎಲ್ಲವೂ ಶರಣರ ಅನುಭಾವದ ನುಡಿಯೊಳಗೆ ಸಿಲುಕಿ, ತನ್ನದೇ ಆದ ಕಾಂತಿಯ ವಿಸ್ತಾರದ ಗಹನತೆಯಲ್ಲಿ ಮಿನುಗತೊಡಗಿದ್ದು ಒಂದು ಸೋಜಿಗ.

'ಅರಿವು' ಎಂಬ ಪದ ವ್ಯಕ್ತದಿಂದ ಅವ್ಯಕ್ತಕ್ಕೆ ವಿಸ್ತರಿಸಿಕೊಳ್ಳುವಂತದ್ದು. ಅದರ ಅರ್ಥ ಬಿಡಿಸ ಹೊರಟರೆ ನಮಗೆ ಅಪ್ರಮೇಯವೇ ಸರಿ...! ಅನುಭವ ಅನುಭಾವವಾಗಿ ನಂತರ 'ಅರಿವು' ಎಂಬ ಪದೋನ್ನತಿಯನ್ನು ಪಡೆಯಿತು. ಅಲ್ಲಮ ಪ್ರಭುವಿಗೂ 'ಅರಿವಿ'ನ ಅರ್ಥ ನಿಗೂಢವಾಗಿಯೇ ಕಾಣುತ್ತದೆ. ಆತ ತನ್ನ ವಚನದಲ್ಲಿ

ಅರಿವು ಅರಿವು ಎನ್ನುತಿಪ್ಪಿರಿ, ಅರಿವು ಸಾಮಾನ್ಯವೇ?
ಹಿಂದಣ ಹೆಜ್ಜೆಯ ನೋಡಿ ಕಂಡಲ್ಲದೆ
ನಿಂದ ಹೆಜ್ಜೆಯನರಿಯಬಾರದು
ಮುಂದಣ ಹೆಜ್ಜೆಯಳಿದಲ್ಲದೆ ಒಂದು ಪಾದ ನೆಲೆಗೊಳ್ಳದು
ನೆಲನ ಬಿಟ್ಟು ಆಕಾಶದಲ್ಲಿ ನಿಂದು ಮುಗಿಲೊಳಗೆ ಮಿಂಚಿದಲ್ಲದೆ
ತಾನಾಗಬಾರದು ಗುಹೇಶ್ವರನೆಂಬುದು ಬರಿದೆ ಬಹುದೇ ಹೇಳಿರಿ?'

ಅಲ್ಲಮ ಅರಿವಿನ ಅರ್ಥವನ್ನು ತನ್ನ ಬೆಡಗಿನ ವಚನದಲ್ಲಿ, ಹಿಂದಣ, ಮುಂದಣ, ಹೆಜ್ಜೆಯ ಅರಿತ, ಅರಿವಿನ ಜ್ಞಾನ ಮುಗಿಲೊಳಗಿನ ಮಿಂಚಿನಂತೆ. ಅದಕ್ಕೆ ಸಾಧನೆ ಸಿದ್ಧಿ ಬೇಕು. ಹಾಗೆ ಸುಮ್ಮನೆ ಸಿಗುವಂಥದ್ದಲ್ಲ. ಅರ್ಥೈಸಿಕೊಳ್ಳುವಿಕೆಯ ಅಂತರ್ಗತ ಭಾವ. ಭಾಷೆಯೊಳಗೆ ಸಿಕ್ಕಾಗ, ಅನುಭವ ವೇದ್ಯವಾಗುತ್ತದೆ.

ಸ್ವಯಂ ಬ್ರಹ್ಮಾ, ಸ್ವಯಂ ವಿಷ್ಣು: ಸ್ವಯಂ ಮಿಂದ್ರಾ:
ಸ್ವಯಂ ಶಿವ: ಸ್ವಯಂ ವಿಶ್ವಮಿದಂ ಸರ್ವಂ ಸ್ವಸ್ಮಾದನ್ಯನ್ನ ಕಿಂಚನ'.





ಸರ್ವಲೋಕದ ಕಾರ್ಯಕಾರಣಕ್ಕೆ ಮೂಲ ನಾವೇ ಆಗಿರುತ್ತೇವೆ. ತನ್ನ ಅಂತರಂಗದಲ್ಲಿರುವ ಅರಿವೇ ಗುರುವಾಗಿರುತ್ತದೆ. ನಮ್ಮ ಯೋಚನೆ, ಕ್ರಿಯೆಯಲ್ಲಿ ಮನಸ್ಸು ಲೀನವಾಗಬೇಕು. ಆಗ ಅನುಭಾವ ಅರಿವಾಗಿ ಹೊರಹೊಮ್ಮುತ್ತದೆ. ಈ ಅರಿವೇ ಸಮಸ್ತ ಜೀವಿಗಳ ಗುರು ದೇವರು ಸಹ ಆಗಿಬಿಡುತ್ತದೆ. ಇಲ್ಲಿ ತಾನೇ ಅವನಾಗುವ, ಲೀನವಾಗುವ ಭಾವ.

'ಅರಿತರೆ ಶರಣ. ಮರೆತರೆ ಮಾನವ.' ಅರಿವಿನೊಡನೆ ಹಂತ ಹಂತವಾಗಿ ಷಟ್ಸ್ಥಲ ಸಾಧಕನಾಗುವ ಶರಣ ಭಕ್ತ ಸ್ಥಲ, ಮಹೇಶ್ವರ ಸ್ಥಲ, ಪ್ರಸಾದಿ ಸ್ಥಲ, ಪ್ರಾಣಲಿಂಗಿ ಸ್ಥಲ, ಶರಣ ಸ್ಥಲ, ಐಕ್ಯಸ್ಥಲವನ್ನು ಸಂಪಾದಿಸಿಕೊಳ್ಳುತ್ತಾನೆ.

ಅರಿವು ಎಂಬುದು ನಮ್ಮೊಳಗಿನ ಎಚ್ಚರ. ಸಾಮಾಜಿಕ ಪ್ರಜ್ಞೆ, ಶೈಕ್ಷಣಿಕ ಜ್ಞಾನ, ನಮ್ಮನ್ನು ನಾವು ಆತ್ಮಾವಲೋಕನದಲ್ಲಿ ತಿದ್ದಿ ಸರಿಪಡಿಸಿಕೊಳ್ಳುವ ತಿಳುವಳಿಕೆ. ನಮ್ಮ ವ್ಯಕ್ತಿತ್ವದ ಉನ್ನತೀಕರಣದ ಎಚ್ಚರ. ಹೀಗೆ ಎಲ್ಲದರ ಸಂಗಮವೇ 'ಅರಿವು'. ಇಂತಹ ಅರಿವುಳ್ಳವನೇ ಶರಣ .

ತನ್ನ ತಾನರಿದಡೆ ನುಡಿಯೆಲ್ಲಾ ತತ್ತ್ವ ನೋಡಾ
ತನ್ನ ತಾ ಮರೆದಡೆ ನುಡಿಯೆಲ್ಲ ಮಾಯೆ ನೋಡಾ.

ತನ್ನನ್ನು ತಾನು ಅರಿಯುವುದು ಒಂದು ವಿಶೇಷವಾದ ಸ್ಥಿತಿ, ನಿಲುವು. ಅರಿವಿನೊಳಗೆ ತಾನೇ ಎಚ್ಚರವಾಗುವ ಬಗೆ. ಶರಣರಿಗೆ ಸಮಾಜವನ್ನು ತಿದ್ದುವುದರ ಜೊತೆಗೆ, ತನ್ನೊಳಗಿನ ತಪ್ಪುಗಳನ್ನು ವಿಮರ್ಶಿಸಿಕೊಳ್ಳುವ, ನೇರವಾಗಿ ಹೇಳುವ ದಿಟ್ಟತನವಿತ್ತು. ಹಾಗಾಗಿ ಅವರು ಶರಣರಾದರು, ಸಂತರಾದರು.

ಮೂಗರ ಮೂಗರ ಪ್ರಸಂಗದಂತೆ ಇದೆ
ಎನ್ನೊಳಗೆ ಅರಿವಿನ ಪರಿಮಳ
ಹೊರಗೆ ನೋಡಿದಡೆ ಮುಗ್ಧವಾಯಿತ್ತು
ಇದನೆಂದು ಉಪಮಿಸುವೆ ಅನಿಯಮದ ಬೆಡಗ?

ಅಲ್ಲಮ ತನ್ನ ವಚನದಲ್ಲಿ ಶಬ್ಧಕ್ಕೆ ಅತೀತವಾದ, ಉಪಮೆಗೆ ಸಿಕ್ಕದ ಅವ್ಯಕ್ತ ಭಾವ, ನಿಯಮಕ್ಕೆ ಸಿಕ್ಕದ ಅತೀತವಾದ ಅನುಭವವೇ ಅರಿವೆಂಬ ಪರಿಮಳ ಎನ್ನೊಳಗೆ ಎನ್ನುತ್ತಾನೆ.

ನಿಮ್ಮಲ್ಲಿ ನೀವು ತಿಳಿದು ನೋಡಿರೇ
ಅನ್ಯವಿಲ್ಲ ಕಾಣಿರಣ್ಣಾ
ಅರಿವು ತನ್ನಲ್ಲಿಯೇ ತದ್ಗತವಾಗಿದೆ
ಅನ್ಯ ಭಾವವ ನೆನೆಯದೆ
ತನ್ನೊಳಗೆ ತಾನೆಚ್ಚರಿರಬಲ್ಲಡೆ ತನ್ನಲ್ಲಿಯೇ ತನ್ಮಯ ಗುಹೇಶ್ವರ ಲಿಂಗವು

'ತನ್ನ ತಾನರಿತು, ತಾನಾರೆಂದು ತಿಳಿದೊಡೆ ತಾನೇ ದೇವನಾಗುತ್ತಾನೆ'.

ಅರಿವಿಲ್ಲದವನನ್ನು ಯಾವ ದೇವರೂ ಕಾಪಾಡಲಾರ. ನಮ್ಮಲ್ಲಿಯೇ ಇರುವ ಶಕ್ತಿಯನ್ನು

ಕಾಣುವ, ಅರಿವಿನ ಕಣ್ಣು ಸದಾ ಕಾಲ ಎಚ್ಚರಿರಬೇಕು. ನಮ್ಮಲ್ಲಿ ನಾವು ಎಚ್ಚರದ ತಿಳಿವು ಇದ್ದರೆ ಅದೇ ದೈವ ಸಾಕ್ಷಾತ್ಕಾರ.

ಏನ ಕಂಡಡೇನಯ್ಯಾ? ತನ್ನ ಕಾಣದಾತ ಕುರುಡ.
ಏನ ಕೇಳಿದಡೆನಯ್ಯಾ? ತನ್ನ ಕೇಳದಾತ ಕಿವುಡ.
ಏನ ಮಾತನಾಡಿದಡೇನಯ್ಯಾ? ತನ್ನ ಮಾತಾಡದಾತ ಮೂಕ.
ದಿಟದಿಂದ ತನ್ನ ತಾ ಕಾಣಬೇಕು ದಿಟದಿಂದ ತನ್ನ ತಾ ಕೇಳಬೇಕು
ದಿಟದಿಂದ ತನ್ನ ತಾ ಮಾತಾಡಬೇಕು. ಮೊದಲು ತನ್ನ ತಾನರಿಯಬೇಕು.

ಹೀಗೆ ಅರಿತವನಿಗೆ ಸಕಲ ವಿಸ್ತಾರದ ರೂಹು. ಅದೇ ಅರಿವು. ತನ್ನನ್ನು ತಾನು ಕಂಡುಕೊಳ್ಳಬೇಕು. ತನ್ನ ಒಳಗಿನ ಅಂತರಂಗದ ಧ್ವನಿಯನ್ನು ಕೇಳಿಸಿಕೊಳ್ಳಬೇಕು. ತನ್ನನ್ನು ತಾನು ಅರಿತ ನುಡಿಗಳು ಅವನ ಮಾತಾಗಬೇಕು. ಇಲ್ಲದಿದ್ದರೆ ಎಲ್ಲವೂ ವ್ಯರ್ಥ, ಕಂಡು, ಕೇಳಿ, ನುಡಿಯದೆ ಇದ್ದರೆ ಯಾವ ಪ್ರಯೋಜನವು ಸಿಗಲಾರದು.

ಹಗಲು ನಾಲ್ಕು ಜಾವ ಅಶನಕ್ಕೆ ಕುದಿವರು
ಇರುಳು ನಾಲ್ಕು ಜಾವ ವ್ಯಸನಕ್ಕೆ ಕುದಿವರು
ತನ್ನೊಳಗಿರ್ದ ಘನವನರಿಯರು
ಅಗಸ ನೀರೊಳಗಿರ್ದು ಬಾಯಾರಿ ಸತ್ತಂತೆ

ಅಗಸನ ಸ್ಥಿತಿಯಂತೆ ಇಂದು ನಮ್ಮ ಸ್ಥಿತಿ. ನಮ್ಮಲ್ಲಿಯೇ ಇರುವ ಅರಿವೆಂಬ ಘನವನ್ನು ಪಡೆಯದೆ ವ್ಯರ್ಥವಾಗಿ ಜೀವನ ಮುಗಿಸುತ್ತೇವೆ. ಸಾಧನೆಯ ಹಾದಿ ಕಷ್ಟಕರ. ಸಾಧಿಸಿದರೆ ಸುಲಭ. ಅರಿವಿನಿಂದ ಶಾಶ್ವತವಾದ ಶಿವಾನಂದ, ಚಿನ್ಮಯ ದಿವ್ಯಾನಂದ ಲಭಿಸುತ್ತದೆ.

ಬಸವಣ್ಣನವರು ತಮ್ಮ ವಚನದಲ್ಲಿ
ಏನನಾದರೆಯೂ ಸಾಧಿಸಬಹುದು, ಮತ್ತೇನನಾದರೆಯೂ ಸಾಧಿಸಹುದಯ್ಯಾ
ತಾನಾರೆಂಬುದ ಸಾಧಿಸಬಾರದು, ಕೂಡಲಸಂಗಮ ದೇವರ ಕರುಣವುಳ್ಳವಂಗಲ್ಲದೆ.

ಏನ್ನನ್ನು ಬೇಕಾದರೂ ಮಾಡಿ, ಭೌತಿಕ ಜಗತ್ತಿನಲ್ಲಿ ಸಾಧನೆಯೆಂದು ತೋರಿಸಬಹುದು. ತನ್ನನ್ನು ತಾನು ಅರಿಯುವ ಆಧ್ಯಾತ್ಮದ ಸಾಧನೆ ಬಹು ದೊಡ್ಡದು. ತನ್ನ ತಾನರಿಯಲು ಗುರುವಿನ ಕರುಣೆ ಇರಬೇಕು. ಗುರುವಿನಿಂದ ಪಡೆದ ಜ್ಞಾನದಿಂದ ಅರಿವು ಮೂಡುತ್ತದೆ.

ಹರ ಮುನಿದರೆ ಗುರು ಕಾಯ್ವನಲ್ಲದೆ, ಗುರು ಮುನಿದರೆ ಹರಿ ಹರ ಬ್ರಹ್ಮಾದಿಗಳಿಲ್ಲ.

'ಅರಿವು' ಇಲ್ಲದವನ್ನು ಯಾವ ದೇವರೂ ಕಾಪಾಡಲಾರ. ಅರಿವೆಂಬ ಗುರು ನಮ್ಮ ಅಂತರಂಗದಲ್ಲಿರುವ ಬುದ್ಧಿ, ಜ್ಞಾನ. ಅದನ್ನು ನಾವು ಸದಾ ಎಚ್ಚರದ ಸ್ಥಿತಿಯಲ್ಲಿ ಇಟ್ಟುಕೊಳ್ಳಬೇಕು. ಅಂತರ್‌ಮುಖಿಯಾಗಿ [ವಿದೇಯಕನಾಗಿ] ಅರಿಯುವ ಪ್ರಯತ್ನದ ಆ ಗುರುವಿನ ಮುಂದೆ ಮತ್ಯಾವುದೂ ಇಲ್ಲ.

ನೀನೇ ಸ್ವಯಂ ಜ್ಯೋತಿ ಪ್ರಕಾಶವೆಂದರಿಯಲು
ನಿನಗೆ ನೀನೆ ಗುರುವಲ್ಲದೆ ನಿನ್ನಿಂದಧಿಕಮಪ್ಪ ಗುರು ಉಂಟೇ?





'ಅರಿವು' ನಮ್ಮಲ್ಲಿಯೇ ಸಿದ್ಧಿಯಾಗಿ, ನಾವೇ ಸ್ವಯಂ ಪ್ರಕಾಶವೆಂದು ಅರಿತಾಗ, ನಮಗೆ ನಾವೇ ಗುರುವಾಗುತ್ತೇವೆ. ಅದಕ್ಕೆ ಬೇರೆ ಗುರುವನ್ನು ಹುಡುಕುವ ಅಗತ್ಯವಿಲ್ಲ. ನಮಗಿಂತ ಮೀರಿದ ಶಕ್ತಿ ಮತ್ತೊಂದಿಲ್ಲ. ಲಿಂಗವೆಂಬ ಕುರುಹಿನಿಂದ 'ಅರಿವು' ದೊರೆಯುತ್ತದೆ. ತನ್ನನ್ನು ತಾನು ತಿಳಿಯ ಹೊರಟಾಗ 'ನಾನು' ಎಂಬ ಅಜ್ಞಾನಕ್ಕೆ ಸಿಲುಕಿದರೆ ಮತ್ತೆ ಅರಿವನ್ನು ಪಡೆಯುವುದು ದೂರದ ಮಾತು. ಅದಕ್ಕೆ ಅಲ್ಲಮ.

ತನ್ನ ತಾನಾರಿದೆನೆಂಬವನ ಮುನ್ನ ನುಂಗಿತ್ತು ಮಾಯೆ
ನಿನ್ನೊಳಗೆ ಅರಿವು ಭಿನ್ನವಾಗಿರುತ್ತಿರಲು
ಮುನ್ನವೆ ನೀನು ದೂರಸ್ಥ ನೋಡಾ
ಭಿನ್ನವಿಲ್ಲದ ಅಜ್ಞಾನವ ಭಿನ್ನವ ಮಾಡಬಲ್ಲಡೆ
ತನ್ನಲ್ಲಿ ಅರಿವು ನಿಜವಪ್ಪುದು ಗುಹೇಶ್ವರಾ

ತಾನು ಅರಿತವನು ಎಂಬ ಮಾಯೆಗೆ ಸಿಲುಕಿ ಸ್ವಾರ್ಥದ ಭಾವನೆ ನೆಲೆಗೊಂಡರೆ, ಅದನ್ನು ಭಿನ್ನ ಮಾಡುವ ಜ್ಞಾನಿಗೆ ಮಾತ್ರ ನಿಜವಾದ ಅರಿವು ಉಂಟಾಗುತ್ತದೆ. ಆತ್ಮೋದ್ಧಾರ ಸಾಧಿತವಾಗುತ್ತದೆ. ಆಗ ಅರಿವು ತನ್ನಲ್ಲಿಯೇ ನಿಜೈಕ್ಯವಾಗುತ್ತದೆ. ತನ್ನನ್ನು ತಾನು ಅರಿಯುವ ಸ್ವರೂಪರಾಗಬೇಕು.

ಸೃಷ್ಟಿ ಮೊದಲಾಗಿ ಅವಸಾನ ಕಡೆಯಾಗಿ ಅರಿವ ಅರಿವೇ ಜ್ಞಾನ ಅಂತಪ್ಪ ಜ್ಞಾನವೇ ಚಿದ್ಬ್ರಹ್ಮ ಆತ್ಮೋದ್ಧಾರಕ್ಕೆ ಅರಿವೆಂಬ ಜ್ಞಾನ. ಇಷ್ಟಲಿಂಗವೆಂಬ ಕುರುಹಿನಿಂದ ಭವ ಬಂಧನಗಳಿಂದ ಮುಕ್ತಿ. ತನ್ನನ್ನು ಅರಿಯುವ ಜ್ಞಾನವೇ ಶ್ರೇಷ್ಠವಾದ ಮುಕ್ತಿ.

ಅರುಹಿನೊಳಗಣ ಕುರುಹು ಮರಹಿಂಗೆ ಬೀಜ
ಕುರುಹಿನ ಮರಹನರಿವು ನುಂಗಿ
ಘನಕ್ಕೆ ಘನವೇದ್ಯವಾದ ಬಳಿಕ ನಿತ್ಯ ಪರಿಪೂರ್ಣ ತಾನೆ
ಕಲಿದೇವರ ದೇವ ವಾಙ್ಮಯಕ್ಕೆ ಗೋಚರನು ಮಡಿವಾಳ ಮಾಚಿದೇವರು.

ಅರಿವಿನೊಳಗಣ ಕುರುಹಿನ ಬೀಜವನ್ನು 'ಅರಿವಿನ' ಸಹಾಯದಿಂದ ವಿಷಯಗಳೆಂಬ ಮುಸುಕನ್ನು ಕಳೆದುಕೊಂಡು, ಆತ್ಮದ ಘನವೇ ಸಾಧನೆಯಾಗಲು ಅರುಹಿಗೆ ಕುರುಹು ಬೇಕೇ ಅರುಹ ಅರಿಯಲೆಂದು, ಕುರುಹ ಕೈಯಲ್ಲಿ ಕೊಟ್ಟ'

'ಮನದ ಭಂಗವ ಅರುಹಿನ ಮುಖದಿಂದ ಗೆಲಿದೆ' ಎನ್ನುವ ಅಕ್ಕ ವಿಷಯಾಸಕ್ತಿಗಳ ಮೋಹದಿಂದ ವಿಮುಖರಾಗಿ ತಾನರಿತ ತನ್ನೊಳಗಿನ ಘನಕ್ಕೆ ಘನವೇ ಸಾಟಿ. 'ಅರಿವು'ವೆಂಬುದು ನಮ್ಮೊಳಗಿನ 'ಬೆಳಕು'. ಅರಿವಿನ ಹಾದಿಗೆ 'ಗುರು' 'ಕುರುಹು' ಸಾಧನವಾದರೆ, ಮುಂದೆ ಅದೇ ಅರಿವಿನ ಮಹಾಬೆಳಗು. ನಮ್ಮ ಈ ಅರಿವಿನ ಎಚ್ಚರವೇ ನಮ್ಮ ಆತ್ಮೋದ್ಧಾರಕ್ಕೆ ತೆರೆದ ಬಯಲು ಬಯಲಾಗಿ ನಿಂತು, ಷಟ್ಸ್ಥಲ ಸಾಧನೆಯ ಆತ್ಮ ವಿಕಾಸದ ಹಾದಿಗೆ ಪ್ರೇರಕವಾಗಿ ನಿಲ್ಲುವ ಅರಿವೆಂಬುದು, ಅನಂತದ ಮಹಾನ್ ಪರಿಪೂರ್ಣತೆ.



# ಅನುಭಾವ ಮತ್ತು ಅನಿರ್ವಚನೀಯತೆ

ಡಾ. ಎನ್.ಜಿ. ಮಹಾದೇವಪ್ಪ

**ನಾ**ವು ಇಂದ್ರಿಯಾನುಭವವನ್ನು ವರ್ಣಿಸಿದಂತೆ ಅನುಭಾವ ಅಥವಾ ತುರೀಯವನ್ನು ವರ್ಣಿಸಲಾಗದು. ಅನುಭಾವಿಗಳೇ ಅದನ್ನು ಅನಿರ್ವಚನೀಯ, ಮಾತು ಮನಂಗಳಿಂದತ್ತತ್ತ, ಮೂಕ/ಶಿಶು ಕಂಡ ಕನಸಿನಂತಿರಬೇಕು, ಎಂದಿದ್ದಾರೆ. ಮುಕ್ತಾಯಕ್ಕನ ಪ್ರಕಾರ ಅನಿರ್ವಚನೀಯತೆಯು ಅನುಭಾವದ ನಿರ್ಧಾರಕ ಲಕ್ಷಣ; ಆದುದರಿಂದ, 'ಅದ್ವೈತವ ನೆಲೆಗೊಳಿಸಿ ಎರಡಳಿದೆನೆಂಬವರು ಶಿಶು ಕಂಡ ಕನಸಿನಂತಿರಬೇಕಲ್ಲದೆ, ನುಡಿದು' ಹೇಳಬಾರದು. ಆಕೆಗೆ ತನ್ನ ಅಣ್ಣ ಅಜಗಣ್ಣ ಮಾದರಿ. 'ಎನ್ನ ಅಣ್ಣ ಅಜಗಣ್ಣನಂತೆ ಶಬ್ದಮುಗ್ಧವಾಗಿರಬೇಕಲ್ಲದೆ ಶಬ್ದಸಂದಣಿಯ ಮಾತು ಸಯವಲ್ಲ' ಎನ್ನುತ್ತಾಳೆ, ಅಲ್ಲಮನನ್ನು ಕುರಿತು ೧. ಅಷ್ಟೇ ಅಲ್ಲ, ನಿಮಗೆ ನುಡಿಯ ಹಂಗು ಇನ್ನೂ ಬಿಟ್ಟಿಲ್ಲ, ನಡೆಯೆನೆಂತು ಪರರಿಗೆ ಬೋಧಿಸುವಿರಿ? ಎಂದು ಅಲ್ಲಮನನ್ನೇ ಮೂದಲಿಸುತ್ತಾಳೆ ೨. ಪ್ರಾಯಶಃ ಅಲ್ಲಮ ಒಬ್ಬ ಪರಿಪೂರ್ಣ ಯೋಗಿಯಾಗಿದ್ದುದರಿಂದ ಈ ಸುಳ್ಳು ಆಪಾದನೆಯನ್ನು ಸಹಿಸಿಕೊಂಡಿರಬೇಕು.

ಒಟ್ಟಿನಲ್ಲಿ ಮುಕ್ತಾಯಕ್ಕ ಮತ್ತು ಅಂಥವರ ಪ್ರಕಾರ ಅನುಭವ ಮಂಟಪ ಅನಾವಶ್ಯಕ. ಅಲ್ಲಿಗೆ ಅನೇಕ ಶರಣರು ಅನುಭಾವವನ್ನು ಕುರಿತು ಚರ್ಚಿಸಲು ಮತ್ತು ಕಲಿಯಲು ಬರುತ್ತಿದ್ದರು. ಅನುಭಾವವನ್ನು ಕುರಿತು ವರ್ಣನೆ ಮಾಡಬಹುದು, ಇತರರಿಗೆ ಬೋಧಿಸಬಹುದು ಎಂಬುದು ಇದರ ಅರ್ಥ. ಹಾಗಾದರೆ ಶರಣರಲ್ಲಿ ಅನುಭಾವವನ್ನು ವರ್ಣಿಸಲಾಗುವುದಿಲ್ಲ ಎಂಬುವವರದೊಂದು ಗುಂಪು, ಅನುಭಾವವು ಅವರ್ಣನೀಯ ಎಂಬುವವರದು ಮತ್ತೊಂದು ಗುಂಪು ಇತ್ತೇನು? ಅಥವಾ ಅನಿರ್ವಚನೀಯ ಎಂದರೇನು? ಯಾವುದು ಅನಿರ್ವಚನೀಯ? ನಾವು ಪ್ರತ್ಯಕ್ಷದ ಮೂಲಕ ಕಲಿತ ಭಾಷೆಗೆ ಅನುಭಾವವೆಂಬ ಅತೀಂದ್ರಿಯ ಅತಿಬೌದ್ಧಿಕ ಅನುಭವವನ್ನು ಸಮರ್ಥವಾಗಿ ವರ್ಣಿಸಲಸಾಧ್ಯ ಎಂದರ್ಥವೇ? ಅಥವಾ ಅನುಭಾವದ ವಿಷಯವು ಅನುಭಾವಿಗಳಲ್ಲದವರಿಗೆ ಅರ್ಥವಾಗುವುದಿಲ್ಲ ಎಂಬುದು ಅದರ ಅರ್ಥವೇ? ಮುಂತಾದ ಪ್ರಶ್ನೆಗಳು ಉಳಿದುಕೊಳ್ಳುತ್ತವೆ.

ಅನಿರ್ವಚನೀಯತೆ ಅನುಭಾವದ ಒಂದು ಅವಿಭಾಜ್ಯ ಲಕ್ಷಣ ಎಂಬುದಂತೂ ನಿಜ. ಆದರೆ ಅನುಭಾವದ ಯಾವ ಅಂಶ ಅನಿರ್ವಚನೀಯ ಎಂಬುದನ್ನು ಹುಡುಕಿದರೆ ಈ

'ಚೈತನ್ಯ' ಐದನೆಯ ಅಡ್ಡರಸ್ತೆ, ಕಲ್ಯಾಣನಗರ, ಧಾರವಾಡ - ೫೮೦ ೦೦೭
ಮೊ ೯೪೮೩೯೬೭೮೨೯



ಗೊಂದಲ ಪರಹಾರವಾಗುತ್ತದೆ. ಇದಕ್ಕೆ ನಮಗೆ ಎರಡು ಉತ್ತರಗಳು ಸಿಕ್ಕುತ್ತವೆ.

ಅನುಭಾವ ಅಥವಾ ತುರಿಯಾವಸ್ಥೆಯಲ್ಲಿ ಇರುವವರೆಗೆ ಬಹಳಷ್ಟು ಅನುಭಾವಿಗಳಿಗೆ ಅತೀವ ಆನಂದ ಉಂಟಾಗುತ್ತದೆ. ಅದನ್ನು ಅನುಭಾವಿಗಳು ಕೈವಲ್ಯಾನಂದ, ಶಿವಾನಂದ, ಬ್ರಹ್ಮಾನಂದ, ನಿತ್ಯಾನಂದ, ಸದಾನಂದ ಮುಂತಾಗಿ ವರ್ಣಿಸುತ್ತಾರೆ. ಆಗ ಆತ್ಮವು ಭೌತವಸ್ತುಗಳೊಡನೆಯೂ ಇಂದ್ರಿಯಮನಸಾದಿಗಳೊಡನೆಯೂ ಇರುವ ಸಂಬಂಧವನ್ನು ತಾತ್ಕಾಲಿಕವಾಗಿ ಕಡಿದುಕೊಂಡು ಕೇವಲ ತಾನೊಂದೇ ಇರುವುದರಿಂದ ಅದು ಕೈವಲ್ಯಾನಂದ ಎನಿಸಿಕೊಳ್ಳುತ್ತದೆ; ಆತ್ಮವು ಆನಂದವನ್ನು ಇಂದ್ರಿಯ ಮತ್ತು ವಿಷಯಗಳ ಸಂಬಂಧದ ಮೂಲಕ ಪಡೆಯುವುದಿಲ್ಲ, ಅದರ ಮೂಲ ಸ್ವರೂಪವೇ ಆನಂದ. ಸಾಂಸಾರಿಕ ಉಪಾಧಿಗಳಿಂದಾಗಿ ಆ ಆನಂದ ಪ್ರಕಟವಾಗುವುದಿಲ್ಲ; ಆಧ್ಯಾತ್ಮಿಕ ಸಾಧನೆಯಿಂದಾಗಿ ಆ ದೋಷಗಳನ್ನು ನಿವಾರಿಸಿ, ಅನುಭಾವವನ್ನು ಪಡೆದವರಲ್ಲಿ ಅದು ಪ್ರಕಟವಾಗುತ್ತದೆ. ಅದು ಆತ್ಮಾನಂದ. ಈ ಆತ್ಮವನ್ನೇ ಅನುಭಾವಿಗಳು ಶಿವ ಅಥವಾ ಬ್ರಹ್ಮ ಎಂದು ಪರಿಗಣಿಸಿದರೆ ಆಗ ಅವರ ಆನಂದ ಶಿವಾನಂದ ಅಥವಾ ಬ್ರಹ್ಮಾನಂದ.

ಈ ಆನಂದವು ಅತ್ಯಂತ ಉತ್ಕಟವಾದ ಆನಂದ. ವಿಷಯಸುಖವು ಇಂದ್ರಿಯ ಮತ್ತು ವಿಷಯಗಳ ಸಂಪರ್ಕ ಇರುವವರೆಗೆ ಮಾತ್ರ. ಆದರೆ ಆನುಭಾವಿಕ ಆನಂದವು ಕೆಲವರ ಪ್ರಕಾರ ನಿತ್ಯ. ಅಲ್ಲಮಪ್ರಭು ಹೇಳುವಂತೆ "ತಾಗು ತಡೆಯಿಲ್ಲದ ಸುಖ" (೨/೭೯೧). ಇದು ಇಂದ್ರಿಯ ಮತ್ತು ವಿಷಯಗಳ ಸಂಪರ್ಕದಿಂದ ಬರುವ ಯಾವುದೇ ರೀತಿಯ ಸುಖಕ್ಕಿಂತ ಭಿನ್ನ. ಆದುದರಿಂದ ಅದು ಅನಿರ್ವಚನೀಯ. ಇಂದ್ರಿಯ ಸುಖವನ್ನು ಕೆಲವು ಸಂದರ್ಭಗಳಲ್ಲಾದರೂ ವರ್ಣಿಸಬಹುದು. ಆದರೆ ಆತ್ಮಾನಂದ ಅವರ್ಣನೀಯ. ಅಲ್ಲಮ ಹೇಳುವಂತೆ, "ಮನದ ಸುಖವ ಕಂಗಳಿಗೆ ತಂದರೆ, ಕಂಗಳ ಸುಖವ ಮನಕೆ ತಂದರೆ ನಾಚಿತ್ತು ಮನ, ನಾಚಿತ್ತು ಮನ. . ." (೨/೨೦೬).

ಆದರೆ ಅವರ್ಣನೀಯತೆ ಎಂಬುದು ಆನುಭಾವಿಕ ಆನಂದಕ್ಕಷ್ಟೇ ಸೀಮಿತವಾಗಿಲ್ಲ. ನಮ್ಮ ಸಾಧಾರಣ ಅನುಭವದಲ್ಲಿ ಬರುವ ಕೆಲವು ಸನ್ನಿವೇಶಗಳನ್ನೂ ನಾವು ಅವರ್ಣನೀಯ ಎನ್ನುತ್ತೇವೆ. ಒಂದು ಮಗು ಬಂಧು-ಬಳಗವನ್ನು ಕಳೆದುಕೊಂಡು ಅಳುತ್ತಿರುವಾಗ ನಾವು ಅದರ ದಯನೀಯ ಸ್ಥಿತಿಯನ್ನು ಅವರ್ಣನೀಯ ಎನ್ನುತ್ತೇವೆ. ಕಾದಂಬರಿಕಾರನೊಬ್ಬ ಆ ಸ್ಥಿತಿಯನ್ನು ವರ್ಣಿಸಿ ಓದುಗರಲ್ಲಿ ದುಃಖವನ್ನು ಉಂಟುಮಾಡಬಹುದು. ಆದರೆ ಆ ವರ್ಣನೆ ಪೂರ್ಣವಲ್ಲ; ಪ್ರಾಯಶಃ ಸಮರ್ಥವೂ ಅಲ್ಲ. ಇಲ್ಲಿ ಅವರ್ಣನೀಯ ಎಂದರೆ ಬಹಳ ದಯನೀಯ ಎಂದಷ್ಟೇ ಅರ್ಥ. ಅದೇ ರೀತಿ, ನಾವು ಸಮುದ್ರದ ಭೀಕರ ಅಲೆಗಳನ್ನು ನೋಡಿದಾಗ, ಸೂರ್ಯಾಸ್ತದ ವಿವಿಧ ವರ್ಣಗಳ ಜೋಡಣೆಯನ್ನು ನೋಡಿದಾಗ, ಯುದ್ಧದಲ್ಲಿ ಆಗುವ ಕೊಲೆಗಳನ್ನು ನೋಡಿದಾಗ, ಸರೋವರವೊಂದರ ಶಾಂತತೆ ಹಾಗೂ ಸೌಂದರ್ಯವನ್ನು ನೋಡಿದಾಗ ನಾವು ಮೂಕರಾಗುತ್ತೇವೆ. ಆ ಸನ್ನಿವೇಶಗಳನ್ನು ವರ್ಣಿಸಲು ನಾವು ಸೋಲುತ್ತೇವೆ ಎಂಬುದು ಇದರ ಅರ್ಥವಲ್ಲ.

ತಾತ್ಕಾಲಿಕವಾಗಿ ಭಾಷೆಯನ್ನು ಮರೆಯುತ್ತೇವೆ ಎಂದರ್ಥ. ಇಂಥ ಸನ್ನಿವೇಶಗಳನ್ನು ನಾವು ಇತರರಿಗೆ ವರ್ಣಿಸಬಹುದು. ಆದರೆ ನಮ್ಮ ವರ್ಣನೆ ಸಮರ್ಥವಾಗಿಲ್ಲದಿರಬಹುದು. ಆದರೆ, ಇಲ್ಲೆಲ್ಲ ಆ ಅವರ್ಣನೀಯತೆಗೆ ಒಂದು ವಿಶಿಷ್ಟ ಅರ್ಥವಿದೆ. 'ಸಮುದ್ರದ ಅಲೆಗಳ ಭೀಕರತೆ ಅವರ್ಣನೀಯ' ಎಂದರೆ ಬಹಳ ಭೀಕರ ಎಂದೇ ಅರ್ಥ; 'ಸೂರ್ಯಾಸ್ತದ ಸೌಂದರ್ಯ ಅವರ್ಣನೀಯ' ಎಂದರೆ ಬಹಳ ಸುಂದರ ಎಂದೇ ಅರ್ಥ; ಆನಂದದ ವಿಷಯದಲ್ಲಿಯೂ ಹಾಗೆಯೆ. ನಾವು ಒಂದು ಕುರ್ಚಿಯನ್ನು ಸಮರ್ಥವಾಗಿ ವರ್ಣಿಸಿದಂತೆ ಸೂರ್ಯಾಸ್ತದ ಸೌಂದರ್ಯವನ್ನಾಗಲಿ ಸಮುದ್ರದ ಅಲೆಗಳ ಭೀಕರತೆಯನ್ನಾಗಲಿ ವರ್ಣಿಸಲಾಗುವುದಿಲ್ಲ. ಕುರ್ಚಿಯ ಬಣ್ಣ ಆಕಾರ ಗಾತ್ರಗಳನ್ನು ವರ್ಣಿಸುವ ವಸ್ತುನಿಷ್ಠ ಭಾಷೆಯ ಮೂಲಕ ಇತರರ ಮನಸ್ಸಿನಲ್ಲಿ ಅದರ ಚಿತ್ರವನ್ನು ಹೆಚ್ಚು-ಕಡಿಮೆ ಸ್ಪಷ್ಟವಾಗಿ ಮೂಡಿಸಬಹುದು. ಆದರೆ, ಸಮುದ್ರದ ಭೀಕರ ಅಲೆಗಳ ಒಂದು ಸಮರ್ಥ ವರ್ಣನೆಯನ್ನು ಓದಿದವರ ಮನಸ್ಸಿನಲ್ಲಿ ಭೀಕರತೆಯ ಭಾವ ಸರಿಯಾಗಿ ಮೂಡದೆ ಇರಬಹುದು; ಸೂರ್ಯಾಸ್ತದ ವಿವಿಧ ವರ್ಣಗಳ ಜೋಡಣೆಯ ವರ್ಣನೆಯನ್ನು ಓದಿದವರ ಮನಸ್ಸಿನಲ್ಲಿ ಸೌಂದರ್ಯಾನುಭವ ಆಗದೆ ಇರಬಹುದು. ಹಾಗೆಯೇ ಆನಂದವನ್ನು ಯಾವುದೇ ಭಾಷೆಯಲ್ಲಿ ವರ್ಣಿಸಿದರೂ ಅದನ್ನು ಓದಿದವನ ಮನಸ್ಸಿನಲ್ಲಿ ಆನಂದ ಉಂಟಾಗದಿರಬಹುದು. ಈ ಅರ್ಥದಲ್ಲಿ ಆನಂದ ಅವರ್ಣನೀಯ. ಬಸವಣ್ಣನವರು ಶಿವಸಾಯುಜ್ಯಕ್ಕಿಂತ ಸಾಮರಸ್ಯದ ಆನಂದ ಹೆಚ್ಚಿನದು ಎನ್ನುತ್ತಾರೆ (೧/೯೨೨). ಹೇಗೆಂದು ಹೇಳುವುದಿಲ್ಲ. ಏಕೆಂದರೆ ಅದು ಅವರ್ಣನೀಯ. ಅಲ್ಲಮಪ್ರಭು ಅನುಭವ ಪರಮಸುಖಿ ಎಂದರೂ ಅವನ ಸುಖ (ಆನಂದ) ಯಾವ ರೀತಿಯದು, ಅದರ ಗುಣಗಳೇನು ಎಂಬುದು ಅವರ್ಣನೀಯ (೨/೧೭೦). ಹೀಗೆ, ಸುಖ, ದುಃಖ, ಭೀತಿ ಮುಂತಾದ ಸಂವೇಗಗಳು (emotions) 'ಬಹಳ, ಉತ್ಕಟ' ಎಂಬರ್ಥದಲಾದರೆ ಅವು ವರ್ಣನೀಯ; ಅವುಗಳನ್ನು ವಸ್ತುನಿಷ್ಠ ಭಾಷೆಯಲ್ಲಿ ವರ್ಣಿಸಲಾಗುವುದಿಲ್ಲ ಎಂಬರ್ಥದಲ್ಲಾದರೆ ಅವು ಅವರ್ಣನೀಯ.

ಪ್ರಾಯಶಃ ಅನಿರ್ವಚನೀಯ ೩ ಎಂದರೆ ಇದು ಇರಬಹುದು: ನಾವು ಯಾವುದೇ ವಸ್ತುವನ್ನು ಇದು ಹಸು, ಇದು ಪುಸ್ತಕ ಎಂದು ಹೇಳಬೇಕಾದರೆ ಅನೇಕ ಹಸು, ಅನೇಕ ಪುಸ್ತಕಗಳನ್ನು ನಾವು ನೋಡಿರಬೇಕಾಗುತ್ತದೆ. ದೊಡ್ಡ ಪುಸ್ತಕ, ಸಣ್ಣ ಪುಸ್ತಕ, ಕೆಂಪು ಪುಸ್ತಕ, ನೀಲಿ ಪುಸ್ತಕ, ಹಳದಿ ಪುಸ್ತಕ ಮುಂತಾದ ಅನೇಕ ರೀತಿಯ ಪುಸ್ತಕಗಳನ್ನು ನೋಡಿ ಅವುಗಳ ಸಾಮಾನ್ಯ ಗುಣವಾದ 'ಪುಸ್ತಕತ್ವ'ವನ್ನು ಗ್ರಹಿಸಿ, ಪುಸ್ತಕ ಎಂಬ ಪರಿಕಲ್ಪನೆಯನ್ನು ರೂಪಿಸಿಕೊಳ್ಳುತ್ತೇವೆ. ಬಿಳಿ ಹಸು, ಕರಿ ಹಸು, ಜರ್ಸಿ ಆಕಳು, ಗಿಡ್ಡ ಆಕಳು, ಮುಂತಾದ ಅನೇಕ ರೀತಿಯ ಹಸುಗಳನ್ನು ನೋಡಿ ಅವುಗಳ ಸಾಮಾನ್ಯ ಗುಣವಾದ 'ಹಸುತನ'ವನ್ನು ಗ್ರಹಿಸಿ, ಹಸು ಎಂಬ ಪರಿಕಲ್ಪನೆಯನ್ನು ರೂಪಿಸಿಕೊಳ್ಳುತ್ತೇವೆ. ಈ ಪರಿಕಲ್ಪನೆಯನ್ನು ರೂಪಿಸಿಕೊಂಡ ಮೇಲೆ ಹಸುತನವಿರುವ ಪ್ರಾಣಿಯನ್ನು ನೋಡಿ 'ಇದು ಹಸು' ಅಥವಾ 'ಇದು ಹಸುತನಕ್ಕೆ ಉದಾಹರಣೆ' ಎನ್ನುತ್ತೇವೆ. ಆದರೆ ಅನುಭಾವದಲ್ಲಿನ





ವಿಷಯವು ಒಂದೇ ಆಗಿದ್ದು ಅದು ಯಾವ ಪರಿಕಲ್ಪನೆಯ ಉದಾಹರಣೆಯೂ ಆಗಿರದಿದ್ದರೆ ಅದು ಅನುಭಾವಿಗೇ ಅರ್ಥವಾಗುವುದಿಲ್ಲ. ಅವನಿಗೇ ಅರ್ಥವಾಗದಿದ್ದರೆ ಬೇರೆಯವರಿಗೂ ಅವನು ಅದನ್ನು ತಿಳಿಸಲಾರ. ಆಗ ಅದು ಅನಿರ್ವಚನೀಯ. ಉದಾಹರಣೆಗೆ, ಭೌತವಸ್ತು, ಇಂದ್ರಿಯ ಮನಸಾದಿಗಳೊಡನೆ ತಾತ್ಕಾಲಿಕವಾಗಿ ಸಂಬಂಧವನ್ನು ಕಡಿದುಕೊಂಡ ಆತ್ಮ ಒಂದೇ ಇದ್ದಾಗ ಅನುಭಾವಿಯು ಅದನ್ನು ಪರಬ್ರಹ್ಮ, ಲಿಂಗ, ಶೂನ್ಯ, ಬಯಲು ಕರೆಯುತ್ತಾನೆ. ಆದರೆ ಹಸುವೊಂದನ್ನು ನೋಡಿ 'ಇದು ಹಸು ಪರಿಕಲ್ಪನೆಗೆ ಉದಾಹರಣೆ' ಎಂದಂತೆ ಶೂನ್ಯಾನುಭವದನಂತರ 'ಇದು ಶೂನ್ಯ, ಬಯಲು, ನಿರ್ಗುಣ, ನಿರಾಕಾರ' ಎನ್ನಬಹುದೇ ಹೊರತು ಮತ್ತೇನೆಂದು ವರ್ಣಿಸಲೂ ಅವನಿಗೆ ಸಾಧ್ಯವಾಗುವುದಿಲ್ಲ. ಈ ಹಿಂದೆ ಅವನು ಇಂಥ ಅನುಭಾವವನ್ನು ಪಡೆದಿದ್ದರೂ ಅಥವಾ ಎಷ್ಟು ಸಾರಿ ಅನುಭಾವವನ್ನು ಪಡೆದರೂ ಇದು ಶೂನ್ಯ ಎನ್ನಬಹುದೇ ಹೊರತು ಮತ್ತೇನೆಂದೂ ವರ್ಣಿಸಲಾರ. ಆದುದರಿಂದ, ಗುಣಗಳೇ ಇಲ್ಲದ ಪರಬ್ರಹ್ಮ, ಶೂನ್ಯ ಮುಂತಾದ ಪರಿಕಲ್ಪನೆಗಳನ್ನು ರೂಪಿಸಿಕೊಳ್ಳಲು ಯಾವ ಅನುಭಾವಿಗೂ ಸಾಧ್ಯವಿಲ್ಲ. ಅಂದರೆ ಪರಿಕಲ್ಪನೆಯಿಲ್ಲದೆ, ಶೂನ್ಯ ಮುಂತಾದ ಅನುಭವಗಳನ್ನು ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ. ಅರ್ಥಾತ್, ಅನುಭಾವದ ವಿಷಯ (ಶೂನ್ಯ) ಅವರ್ಣನೀಯ. ಹೆಚ್ಚೆಂದರೆ ಅದನ್ನು ಕಾರಣವಲ್ಲ ಕಾರ್ಯವಲ್ಲ, ದೊಡ್ಡದೂ ಅಲ್ಲ, ಸಣ್ಣದೂ ಅಲ್ಲ ಮುಂತಾದ ಸ್ವವಿರೋಧದ ಪದಗಳಲ್ಲಿ ವರ್ಣಿಸಬಹುದು. ಆದರೆ ಅಂಥ ನಕಾರಾತ್ಮಕ ವರ್ಣನೆ ಶೂನ್ಯದ ಬಗೆಗಿನ ನಮ್ಮ ಜ್ಞಾನವನ್ನು ಹೆಚ್ಚಿಸುವುದಿಲ್ಲ. ಸಂಕ್ಷಿಪ್ತವಾಗಿ ಹೇಳಬೇಕೆಂದರೆ ಶೂನ್ಯ ಅವರ್ಣನೀಯ.

ಶೂನ್ಯ ಅವರ್ಣನೀಯವೆಂದು ಅನುಭಾವಿ ಸುಮ್ಮನಿರುವುದಿಲ್ಲ. ಅದನ್ನು ಒಂದು ರೀತಿಯಲ್ಲಿ ವರ್ಣಿಸಲು ಸೋತರೆ, ನಿರಾಶೆಯಾಗದೆ, ಮತ್ತೊಂದು ರೀತಿಯಲ್ಲಿ ವರ್ಣಿಸಲು ಪ್ರಯತ್ನಿಸುತ್ತಾನೆ. ಆಗೆಲ್ಲ ಅವನು ಸ್ವವಿರೋಧಕ್ಕೆ ಒಳಗಾಗುವುದು ಸಾಮಾನ್ಯ. ಉದಾಹಾರಣೆಗೆ ಈ ಕೆಳಗಿನ ಉಪನಿಷತ್ತಿನ ವಾಕ್ಯಗಳನ್ನು ನೋಡಿ:

೧. ಬ್ರಹ್ಮನ್ ಅಚಲ, ಆದರೆ ಅದಕ್ಕೆ ಮನೋವೇಗವಿದೆ, . . . ಅತ್ಯಂತ ವೇಗವಾಗಿ ಓಡುವವನನ್ನು ಅದು ಹಿಂದಕ್ಕೆ ಹಾಕಬಲ್ಲದು . . . (ಈಶಾವಾಸ್ಯ ಉಪ. ೪);

೨. ಅದು ಹತ್ತಿರವಿದೆ, ದೂರವಿದೆ; ಅದು ಅಚಲ, ಚಲಿಸುತ್ತದೆ; ಅದು ಎಲ್ಲದರ ಒಳಗೂ ಇದೆ, ಹೊರಗೂ ಇದೆ (ಅದರಲ್ಲೆ, ೫);

೩. ಕಾಲಿಲ್ಲದೆ ನಡೆಯಬಲ್ಲ; . . . ಕೈಯಿಲ್ಲದೆ ಹಿಡಿಯಬಲ್ಲ; . . . ಮನವಿಲ್ಲದೆ ಯೋಚಿಸಬಲ್ಲ . . . ಆದರೆ ಅಚಿಂತ್ಯ (ಶ್ವೇತಾಶ್ವತರ ಉಪ, iii, ೧೯).

೪. ನೀನೆ ಪುರುಷ, ನೀನೆ ಸ್ತ್ರೀ; ಕುಮಾರ ನೀನೆ, ಕುಮಾರಿ ನೀನೆ, ವೃದ್ಧ ನೀನೆ (ಶ್ವೇತಾಶ್ವತರ ಉಪ., iv,೩); ಇತ್ಯಾದಿ.

ಅಲ್ಲಮನ ವಚನಗಳಲ್ಲಿ ಶೂನ್ಯದ ಬಗೆಗೆ ಅನೇಕ ಸ್ವವಿರೋಧದ ಮಾತುಗಳು ಬರುತ್ತವೆ. ಉದಾಹರಣೆಗೆ:

೧ ಅಪರಿಮಿತ ಕತ್ತಲೆಯೊಳಗೆ ವಿಪರೀತದ ಬೆಳಗನಿಕ್ಕಿದರಾರೊ?
ಬೆಳಕೂ ಅದೆ, ಕತ್ತಲೆಯೂ ಅದೆ!
ಇದೇನು ಚೋದ್ಯವೊ? . . . (೨/೪೯)

ಅಪರಿಮಿತ ಕತ್ತಲೆಯೊಳಗೆ ವಿಪರೀತದ ಬೆಳಕನ್ನಿಕ್ಕುವುದು ಖಂಡಿತ ವಿರೋಧಾಭಾಸ – ವೃತ್ತಾಕಾರದ ಚೌಕ, ಎಂದಂತೆ – ಊಹಿಸಿಕೊಳ್ಳಲೂ ಸಾಧ್ಯವಿಲ್ಲ. ಕತ್ತಲೆ ಎಂದರೆ ಅಜ್ಞಾನ, ಆತ್ಮಜ್ಞಾನದ ಅಭಾವ; ಬೆಳಕು ಎಂದರೆ ಜ್ಞಾನ, ಅನುಭವದ ಮೂಲಕ ಪಡೆಯಬಹುದಾದ ಲಿಂಗಾನುಭವ, ಲಿಂಗಜ್ಞಾನ. ಮಾನವನಿಗೆ ಸಹಜವಾದ ಮರೆವು ಅಥವಾ ಕತ್ತಲು ಇದೆ. ಅದರಿಂದಾಗಿ ಲಿಂಗಾನುಭವ ಸಾಧ್ಯವಾಗುತ್ತಿಲ್ಲ. ಗುರೂಪದೇಶ ಮತ್ತು ಷಟ್ಸ್ಥಲ–ಯೋಗಾಚರಣೆಯಿಂದ, ಅನುಭಾವ ಉಂಟಾದಾಗ ಬೆಳಕು ಅಥವಾ ಲಿಂಗಜ್ಞಾನ ಉಂಟಾಗುತ್ತದೆ. ಹೀಗೆಂದು ಹೇಳುವ ಮೂಲಕ ಸ್ವವಿರೋಧವನ್ನು ಇಲ್ಲವಾಗಿಸಬಹುದು. ಆದರೆ ಇಂಥ ಪರಿಹಾರ ಈ ವಚನವನ್ನು ಅಪಾರ್ಥ ಮಾಡುವುದರ ಮೇಲೆ ನಿಂತಿದೆ. ಅಲ್ಲಮನ ಮಾತಿನಲ್ಲಿರುವ ಬೆಳಕೂ ಅದೇ, ಕತ್ತಲೆಯೂ ಅದೇ ಎಂಬ ಸ್ವವಿರೋಧ ನಮ್ಮ ಮುಖಕ್ಕೆ ರಾಚುತ್ತದೆ. ಅದು ಇರುವುದರಿಂದಲೇ ಅಲ್ಲಮ ಇದೇನು ಚೋದ್ಯ! ಎಂದು ಆಶ್ಚರ್ಯಪಡುತ್ತಾನೆ. ಹೀಗಿರುವಾಗ, ನಾವು ಅದನ್ನು ನಮಗೆ ತಿಳಿದಂತೆ ಅರ್ಥೈಸಿ, ಸ್ವವಿರೋಧ ಇಲ್ಲವೆಂಬಂತೆ ತೋರಿಸುವುದು ನಮ್ಮ ಕೆಲಸವಲ್ಲ. ಏನಿದ್ದರೂ ಅದು ಏಕಿದೆ ಎಂದು ಹೇಳುವುದಷ್ಟೇ ನಮ್ಮ ಕೆಲಸ. ಇಲ್ಲಿಯೂ ನಾವು ಗಮನಿಸಬೇಕಾದುದು ಇದು: ಅಲ್ಲಮನಿಗೆ ಸ್ವವಿರೋಧವೆನಿಸುವುದು, ಅದು ಚೋದ್ಯವಾಗುವುದು ಸಕಾರಣವಾಗಿಯೇ ಇದೆ.

೨. ಶಿವಶಕ್ತಿ ಸಂಪುಟವೆಂಬುದೆಂತು ಹೇಳಿರಣ್ಣಾ;
ಶಿವನೆ ಚೈತನ್ಯಾತ್ಮಕನು, ಶಕ್ತಿಯೆ ಚಿತ್ತು.
ಇಂತು, ಚೈತನ್ಯಾತ್ಮಕನೆ ಚಿತ್‌ಸ್ವರೂಪನೆಂದರಿಯಬಲ್ಲಡೆ
ಆತನೆ ಶರಣ ಗುಹೇಶ್ವರಾ. (೫೪೯)

ಇಲ್ಲಿ ಶಿವ ಎಂದರೆ ಚಿತ್ತು, ಶಕ್ತಿ ಎಂದರೆ ಜಡಶಕ್ತಿ ಎಂದು ಹೇಳುವ ಮೂಲಕ ಸ್ವವಿರೋಧವನ್ನು ಇಲ್ಲವಾಗಿಸಬಹುದು. ಇದು ಶಂಕರಾಚಾರ್ಯರ ಪದ್ಧತಿ. ಆದರೆ 'ಶಿವ' ಮತ್ತು 'ಶಕ್ತಿ' ಎಂಬ ಪದಗಳು ಎರಡು ಭಿನ್ನ, ಪರಸ್ಪರ ಸಂಬಂಧವಿಲ್ಲದ ವಸ್ತುಗಳಿಗೆ ಅನ್ವಯಿಸುವ ಪದಗಳಲ್ಲ. ಗಮನಿಸಿ: ಅಲ್ಲಮ 'ಶಿವಶಕ್ತಿ ಸಂಪುಟ' ಎಂದು ಹೇಳುವ ಮೂಲಕ ಶಿವನೂ ಅದೇ, ಶಕ್ತಿಯೂ ಅದೇ ಎಂಬ ಸ್ವವಿರೋಧಕ್ಕೆ ಒತ್ತು ನೀಡುತ್ತಿದ್ದಾನೆ. ಶಿವನಿಗೆ ಸ್ವಪ್ರಜ್ಞೆ ಉಂಟಾದ ಕೂಡಲೇ ಅವನಲ್ಲಿಯೇ ಅಂತರ್ಗತವಾಗಿದ್ದ ಶಕ್ತಿಯು ಕಾರ್ಯಪ್ರವೃತ್ತವಾಗುತ್ತದೆ. ಆಗ ಶಿವನ ಚಿತ್ತು ಶಕ್ತಿಗೂ ಶಕ್ತಿಯ ಕ್ರಿಯಾಶೀಲತೆ ಶಿವನಿಗೂ ಬರುವುದರಿಂದಾಗಿ ಶಿವಶಕ್ತಿ ಒಂದೇ ಸಂಪುಟ ಆಗುತ್ತದೆ (ಇದನ್ನು ಒಂದು ಉಪಮೆಯ ಮೂಲಕ ವಿವರಿಸಬಹುದು: ಬೆಲ್ಲವನ್ನು ನೀರಿನಲ್ಲಿ ಕರಗಿಸಿದಾಗ, ಬೆಲ್ಲದ ಘನತ್ವ ನೀರಾಗುತ್ತದೆ;





ಸಪ್ಪೆಯಾಗಿದ್ದ ನೀರು ಸಿಹಿಯಾಗುತ್ತದೆ). ಅಲ್ಲಮನ ಮಾತಿನಲ್ಲಿ ಹೇಳಬೇಕೆಂದರೆ: "ಶಿವನೇ ಚೈತನ್ಯಾತ್ಮಕ, ಶಕ್ತಿಯೇ ಚಿತ್ತು; ಚೈತನ್ಯಾತ್ಮಕನೇ ಚಿತ್‌ಸ್ವರೂಪ". ಇಲ್ಲಿ ಸ್ವವಿರೋಧ ನಿವಾರಣೆಯಾಗಿಲ್ಲ, ಆಗಲೂಬಾರದು – ನಿಜವಾದ ಅರ್ಥಕ್ಕೆ ಚ್ಯುತಿ ಬರಬಾರದು, ಎಂದಿದ್ದರೆ.

೩. ಎಲ್ಲಕ್ಕಿಂತ ದೊಡ್ಡ ಸ್ವವಿರೋಧ ಎಂದರೆ ಅಲ್ಲಮ ಆಗಾಗ್ಗೆ ಹೇಳುವ ನಾನೂ ಇಲ್ಲ ನೀನೂ ಇಲ್ಲ ಎಂಬ ಮಾತು. ವಾಸ್ತವವಾಗಿ ಒಂದರ್ಥದಲ್ಲಿ ಇದು ಅಪರಿಹಾರ್ಯ. ಸಮಾಧಿಸ್ಥಿತಿಯಲ್ಲಿ (ಅನುಭಾವದಲ್ಲಿ) ಆತ್ಮವು ಬುದ್ಧಿ, ಮನಸ್ಸು, ಇಂದ್ರಿಯಗಳು ಇತ್ಯಾದಿಗಳೊಡನೆ ಇರುವ ಸಂಬಂಧವನ್ನು ತಾತ್ಕಾಲಿಕವಾಗಿ ಕಡಿದುಕೊಂಡಾಗ ಅದು ತಾನೊಂದೇ ಉಳಿದುಕೊಳ್ಳುತ್ತದೆ. ಆಗ ಅಹಂ (ನಾನು ಎಂಬ ಭಾವ) ನಿಷ್ಕ್ರಿಯವಾಗಿರುವುದರಿಂದ ನಾನು ಧ್ಯಾನ ಮಾಡುತ್ತಿದ್ದೇನೆ ಎನ್ನಲು ಸಾಧ್ಯವಿಲ್ಲ. ನಾನು ಎಂಬ ಭಾವ ಇರುವವರೆಗೂ ಸಮಾಧಿ ಸಾಧ್ಯವಾಗುವುದೂ ಇಲ್ಲ. ಜಾಗೃತಾವಸ್ಥೆಗೆ ಹಿಂದಿರುಗಿದಾಗ ಸಮಾಧಿಸ್ಥಿತಿಯಲ್ಲಿ ನಾನು ಏನನ್ನೂ ಅರಿಯಲಾಗಲಿಲ್ಲ ಎನ್ನಬಹುದು. ಇದನ್ನೆ ಮತ್ತೊಂದು ರೀತಿಯಲ್ಲಿ ಹೇಳುವುದಾದರೆ, ಅನುಭಾವದಲ್ಲಿ ನಾನು ಎಂಬ ಜ್ಞಾತೃವೂ (subject) ಇಲ್ಲ, ನೀನು ಎಂಬ ಜ್ಞೇಯವೂ (object) ಇಲ್ಲ. ಆದರೆ ಅನುಭಾವಿಗಳು ಜಾಗೃತಾವಸ್ಥೆಯಲ್ಲಿಯೂ ಮನನಷ್ಟ/ ಅಹಂನಷ್ಟವಾಯಿತೆಂದು ಹೇಳುತ್ತಾರೆ. ಉದಾಹರಣೆಗೆ, ಮನವೇ ಲಿಂಗವಾದ ಬಳಿಕ ನೆನೆವುದಾರನ್ನು? ಎಂದು ಅಲ್ಲಮ ಕೇಳುವಾಗ, ನೆನೆಯಬೇಕೆಂಬ ಮನಸ್ಸು ಅವನಲ್ಲಿ ಅನುಭಾವದ ದೆಸೆಯಿಂದಾಗಿ ಇಲ್ಲವಾಗಿದೆ ಎಂಬುದು ಸ್ಪಷ್ಟವಾಗುತ್ತದೆ. ಅಲ್ಲಮನೆ ಮತ್ತೆರಡು ಸಾರಿ ಮನನಷ್ಟದ ಬಗೆಗೆ ಹೇಳುತ್ತಾನೆ. ಗ್ರಹ ಹಿಡಿದುಕೊಂಡವನಿಗೆ ತನ್ನತನ ಇಲ್ಲವಾಗಿ ಗ್ರಹದ ಗುಣ ಬರುವಂತೆ, ಲಿಂಗ ಗ್ರಹಣವಾದ ಅನುಭಾವಿಗೆ ಮನ ಇಲ್ಲವಾಗುತ್ತದೆ ಹಾಗೂ ಲಿಂಗದ ಗುಣ ಬರುತ್ತದೆ. ಆಗ ಅವನ ನಡೆ ನುಡಿ ಎಲ್ಲವೂ ಲಿಂಗದ ಕ್ರಿಯೆಗಳು. ಅಂತಹ ಅನುಭಾವಿಯ ಒಂದು ಸ್ಪಷ್ಟ ಚಿತ್ರಣ ಚೆನ್ನಬಸವಣ್ಣನ ಎರಡು ವಚನಗಳಲ್ಲಿ ಸಿಕ್ಕುತ್ತದೆ.

ಎನ್ನ ಕಾಯದೊಳಗೆ ನಿನ್ನ ಕಾಯವಿಪ್ಪುದು,
ನಿನ್ನ ಕಾಯದೊಳಗೆ ಎನ್ನ ಕಾಯವಿಪ್ಪುದು.
ಎನ್ನ ಜೀವದೊಳಗೆ ನಿನ್ನ ಜೀವವಿಪ್ಪುದು,
ನಿನ್ನ ಜೀವದೊಳಗೆ ಎನ್ನ ಜೀವವಿಪ್ಪುದು,
ಎನ್ನ ಪ್ರಾಣದೊಳಗೆ ನಿನ್ನ ಪ್ರಾಣವಿಪ್ಪುದು,
ನಿನ್ನ ಪ್ರಾಣದೊಳಗೆ ಎನ್ನ ಪ್ರಾಣವಿಪ್ಪುದು.
ಎನ್ನ ಇಂದ್ರಿಯಂಗಳೊಳಗೆ ನಿನ್ನ ಇಂದ್ರಿಯಂಗಳಿಪ್ಪುವು,
ನಿನ್ನ ಇಂದ್ರಿಯಂಗಳೊಳಗೆ ಎನ್ನ ಇಂದ್ರಿಯಂಗಳಿಪ್ಪುವು . . . (೩/೧೦೪೬)

ಎನ್ನ ಘ್ರಾಣದ ಬಾಗಿಲಲ್ಲಿರ್ದು, ಸುವಾಸನೆಯ ಸುಖಂಗಳ

ಭೋಗಿಸುವಾತ ನೀನಯ್ಯಾ.
ಎನ್ನ ಜಿಹ್ವೆಯ ಬಾಗಿಲಲ್ಲಿರ್ದು, ಸುರುಚಿಯ ಸುಖಂಗಳ
ಭೋಗಿಸುವಾತ ನೀನಯ್ಯಾ.
ಎನ್ನ ನೇತ್ರದ ಬಾಗಿಲಲ್ಲಿರ್ದು, ಸುರೂಪ ಸುಖಂಗಳ
ಭೋಗಿಸುವಾತ ನೀನಯ್ಯಾ.
ಎನ್ನ ತ್ವಕ್ಕಿನ ಬಾಗಿಲಲ್ಲಿರ್ದು, ಸುಸ್ಪರ್ಶವ ಮಾಡಿ
ಆ ಸ್ಪರ್ಶನಸುಖವ ಸುಖಿಸುವಾತ ನೀನಯ್ಯಾ.
ಎನ್ನ ಶ್ರೋತ್ರದ ಬಾಗಿಲಲ್ಲಿರ್ದು
ಸುಶಬ್ದ ಸುಖಂಗಳ ಭೋಗಿಸುವಾತ ನೀನಯ್ಯಾ.
ಎನ್ನ ಮನದ ಬಾಗಿಲಲ್ಲಿರ್ದು ಪಂಚೇಂದ್ರಿಯಂಗಳನರಿದು
ಸುಖಿಸುವ ಅರಿವಿನಮೂರ್ತಿ ನೀನಯ್ಯಾ.
ಅದೇನು ಕಾರಣವೆಂದಡೆ;
ನೀನಾಡಿಸುವ ಜಂತ್ರದ ಬೊಂಬೆ ನಾನೆಂದರಿದ ಕಾರಣ . . . (೩/೧೦೪೭).

ಅಂದರೆ, ಚೆನ್ನಬಸವಣ್ಣನ ಪ್ರಕಾರ, ಅನುಭಾವದಿಂದಾಗಿ ಶರಣನ ದೇಹೇಂದ್ರಿಯಾದಿಗಳನ್ನು ಲಿಂಗ ಆಕ್ರಮಿಸಿಕೊಂಡಾಗ, ಅವನು ತನ್ನತನವನ್ನು ಕಳೆದುಕೊಂಡು ಲಿಂಗದ ಶರೀರವಾಗುತ್ತಾನೆ.

ಇಲ್ಲಿಯೂ ನಮಗೆ ಮೊದಲಿನ ಪ್ರಶ್ನೆಗೆ ಕಾಡುತ್ತದೆ. ನಾನು (ಅಹಂ, ಮನ) ಇಲ್ಲದೆ ಹೋದರೆ ನಾನು ಇಲ್ಲ ಎಂದು ಹೇಳಲು ಹೇಗೆ ಸಾಧ್ಯ? ಹಾಗೆ ಹೇಳಲಾದರೂ ನಾನು ಇರಲೇಬೇಕಲ್ಲವೇ? ಮೇಲಿನ ವಿರೋಧಾಭಾಸಗಳಂತೆ ಇದನ್ನೂ ಸ್ವೀಕರಿಸಬೇಕು. ಏಕೆಂದರೆ ಅದು ವಾಸ್ತವ. ಅನುಭಾವಿ ತನ್ನತನವನ್ನು ಕಳೆದುಕೊಂಡು ಲಿಂಗದ ಶರೀರವಾಗಿದ್ದಾನೆ ಎಂಬುದೂ ಸತ್ಯ, ಅವನ ಅಹಂನಷ್ಟ/ಮನನಷ್ಟವಾಗಿರುವುದೂ ಸತ್ಯ.

ಇಂಥ ಉದಾಹರಣೆಗಳ ಪರಿಶೀಲನೆಯಿಂದ

೧. ಅನುಭಾವವನ್ನು ವ್ಯಕ್ತಪಡಿಸುವ ಪ್ರಯತ್ನವು ಅನಿವಾರ್ಯವಾಗಿ ಸ್ವವಿರೋಧಗಳಿಗೆ ಒಳಗಾಗುತ್ತದೆ;

೨. ಅಂಥ ಸ್ವವಿರೋಧಗಳು ಇನ್ನೂ ಅನೇಕವಾದರೂ ಅವಾವೂ ಆ ವಸ್ತುವಿನ ಬಗೆಗಿನ ನಮ್ಮ ಅರಿವನ್ನು ಹೆಚ್ಚಿಸುವುದಿಲ್ಲವಾದುದರಿಂದ, ಆ ವಸ್ತು ಅವರ್ಣನೀಯ;

೩. ಅದು ಅವರ್ಣನೀಯ ಎಂದೇ ಅನುಭಾವಿಗಳು ಇತರರಿಗೆ ಬೋಧಿಸುತ್ತಾರೆ, ಆದರೆ ಅವರ ಬೋಧನೆ (ವರ್ಣನೆ) ಕೇಳುಗರಲ್ಲಿ ಶೂನ್ಯದ ಬಗೆಗಿನ ಅರಿವನ್ನು ಹೆಚ್ಚಿಸುವುದಿಲ್ಲ; ಉದಾಹರಣೆಗೆ, ಶೂನ್ಯ ಆದಿಯಿಲ್ಲದ-ಅನಾದಿಯಿಲ್ಲದ, ಕಾರ್ಯವಲ್ಲದ-ಕಾರಣವಲ್ಲದ ಯಾವುದೊ ಒಂದು ರೀತಿಯ ಸತ್ಯ ಎಂಬುದು ಗೊತ್ತಾಗುತ್ತದೆ; ಆದರೆ ಅದರ ಸ್ವರೂಪ ಎಂಥದು ಎಂಬುದು ಗೊತ್ತಾಗುವುದಿಲ್ಲ; ಎಂದು ತೀರ್ಮಾನಿಸಬಹುದು.





---

೧. ಡಾ.ಕಲಬುರ್ಗಿ, ಎಮ್.ಎಮ್ ಮತ್ತು ವೀರಣ್ಣ ರಾಜೂರ್ (ಸಂ):ಗೂಳೂರು ಸಿದ್ಧವೀರಣೊಡೆಯರ ಶೂನ್ಯ ಸಂಪಾದನೆ (ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ-ದಂಬಳ, ೨೦೧೬), ವಚನ ೧೦೫.

೨. ಅದರಲ್ಲೆ. ವ.೧೧೯.

೩. Stace, W.T.: Mysticism and Philosophy (MacMillan and Co., London 1961), pp.285-288.

□

ಹೋತು ಹುಸಿ
ಆಡು ಬಹುಮಾತಿನ ನೀತಿ
ಕುರಿ ಸಕಲೇಂದ್ರಿಯದ ನೆಲ ಹೊಲ
ತಗರು ತಥ್ಯಮಿಥ್ಯದ ಹೋರಟೆ
ಹುಲಿ ದ್ವೇಷದಾಗರ
ತೋಳ ಕೊಂದು ತಿಂಬ ಕಾಟ
ಚೋರ ಮೃತ್ಯು ಇಂತಿವು ಮೊದಲಾದ
ಬಹುವಿಧದ ಪ್ರಕೃತಿಗಳಲ್ಲಿ ಕಾಯದ ನೆಲಹೊಲನಲ್ಲಿ
ಸಕಲೇಂದ್ರಿಯವೆಂಬ ಹಿಂಡು ಮುಂದೆಯಾಗಿವೇಕೊ
ಇದರ ಸಂಗವ ಬಿಡಿಸು ನಿಮ್ಮ ನಿಜದಂಗವ ತೋರಿ
ಭವಪಾಶದಂಗವ ಹರಿದು ನಿಮ್ಮ ಘನಲಿಂಗದಲ್ಲಿರಿಸು
ನೆರೆ ವೀರಬೀರೇಶ್ವರಾ

ನಿರ್ವಚನ ೩೭

# ಅಕ್ಕನ ವಚನಗಳ ನಿರ್ವಚನ

ಬಿದರಹಳ್ಳಿ ನರಸಿಂಹಮೂರ್ತಿ

**ಹಿಂ**ಡನಗಲಿ ಹಿಡಿವಡೆದಕುಂಜರತನ್ನ ವಿಂಧ್ಯವ ನೆನೆವಂತೆ ನೆನೆವೆನಯ್ಯಾ.
ಬಂಧನಕ್ಕೆ ಬಂದ ಗಿಳಿ
ತನ್ನ ಬಂಧುವ ನೆನೆವಂತೆ ನೆನೆವೆನಯ್ಯಾ.
ಕಂದಾ, ನೀನಿತ್ತ ಬಾ ಎಂದು
ನೀವು ನಿಮ್ಮಂದವತೋರಯ್ಯಾ, ಚೆನ್ನಮಲ್ಲಿಕಾರ್ಜುನಾ.

(ಶಿವಶರಣೆಯರ ವ.ಸಂ, ಸ.ವ.ಸಂ೫, ೧೯೯೩ಸಂ:ಡಾ.ವೀ.ರಾ, ಪು.೧೧೭, ವ.೩೪೧)

ಅಕ್ಕನ ಪ್ರಕೃತಿ ಪ್ರೀತಿ ವನ್ಯವಿಜ್ಞಾನ ನಿಸರ್ಗಾನುಭಾವ ಅವಳನೇಕ ವಚನಗಳಲ್ಲಿ ಹೃದ್ಯಕಾವ್ಯವಾಗಿ ದರ್ಶನ ಕ್ಷಣವಾಗಿ ಮೈಪಡೆದು ಕನ್ನಡಾಸ್ವಾದಕ್ಕೆ ದ್ಯೋತಕವಾಗಿರುವುದು ಸರ್ವವಿದಿತ. ಒಮ್ಮೆ ನಲಿವಿಗೆ ಒಮ್ಮೆ ನೋವಿಗೆ ಇನ್ನೊಮ್ಮೆ ಸಾಕ್ಷಾತ್ಕಾರಕ್ಕೆಳಸೊ ಅಕ್ಕನ ನೈಸರ್ಗಿಕ ರೂಪಕಗಳು, ಪ್ರಾಕೃತಿಕ ದೃಷ್ಟಾಂತಗಳು ಅವಳ ಭಾಷಾಭಿವ್ಯಕ್ತಿ ಅರಿವಿನಾಳ ಚೆಲುವಿನೆತ್ತರಕ್ಕೆ ಸಾಕ್ಷಿಯಾಗಿವೆ. ಅನುಭಾವ ಅವಳ ಪಾಲಿಗೆ ಆತ್ಯಂತಿಕ ಸತ್ಯವನ್ನೆ ಅಂಗೈನಲ್ಲಿ ಮಾಡಿ ಹಿಡಿಯಬಲ್ಲ ವಿದ್ಯೆ. ಈ ವಚನದಲ್ಲಿ ನಿಸರ್ಗದ ಕೂಸುಗಳಂತಿರುವ ಆನೆ ಮತ್ತು ಗಿಳಿ ಮಾನವ ನಾಗರಿಕತೆಗೆ ಬೆಚ್ಚಿ ಬೆದರಿದಂತಿವೆ. ತಾಯಗಲಿಕೆ ತಹತಹತವರ ಹಂಬಲದಲ್ಲಿ ತೊಳಲುವ ಅವಕ್ಕೆ ಸೃಷ್ಟಿಕರ್ತನ ಕರುಣಾಕಟಾಕ್ಷವೆ ಏಕೈಕ ಆಸರೆ. ಅದಕ್ಕಾಗಿ ಅವು ಹಾತೊರೆಯುತ್ತಿವೆ.

ಇದೊಂದು ಪರಿಸರಾತ್ಮಕ ಭಾವೋದ್ದೀಪನ ವಚನವೂ ಹೌದು. ಅಕ್ಕ ಜೀವಿಸಿದ್ದ ಯುಗಮಾನದ ಅಗಾಧ ನಿರ್ಜನ ಪರ್ವತಗಳು, ಮೀಸಲು ಕಾಡುಗಳ ನಡುವೆ ನಾಡುಗಳಿನ್ನೂ ಬೆರಳೆಣಿಕೆಯಷ್ಟಿದ್ದ ವಸ್ತುಸ್ಥಿತಿ ಚಿತ್ರಿಸುವ ಈ ವಚನ ಇಂದು ನರವಿಂಧ್ಯದಂತೆ ತಲೆಯೆತ್ತಿರುವ ಗಗನಚುಂಬಿ ನಗರಗಳಲ್ಲಿ ಯಂತ್ರಪಶುಗಳಂಥ ವಾಹನಗಳ ದಟ್ಟಣೆಯಲ್ಲಿ ಸಿಕ್ಕುಬಿದ್ದಿರುವ ಪೀಳಿಗೆಗಳನ್ನ ಮತ್ತೆ ಆ ಆದಿಮ ಕಾಲಖಂಡಕ್ಕೆ ವಿಂಧ್ಯಪರ್ವತ ಶ್ರೇಣಿ ಹಸಿರು ತಂಪಿನ ಮುದಭರಿತ ಪರಿಸರಕ್ಕೆ ಕರೆದೊಯ್ದು ಅಂದಿನ ಆ ಜೀವಜೀವಂತ ಭಾವಸಲಿಲದಲ್ಲಿ ಮೀಯಿಸುವಷ್ಟು ಸುಂದರವೂ ಸಶಕ್ತವೂ ಆಗಿದೆ. 'ಮಲಯ ಮಾರುತ'(೧೯೮೬) ಎಂಬ ಕೆ.ಎಸ್.ಎಲ್.ಸ್ವಾಮಿ ನಿರ್ದೇಶನದ ಸಂಗೀತ ಪ್ರಧಾನ ಕನ್ನಡ ವರ್ಣಚಿತ್ರದ ಆರ್ದ್ರ ಸನ್ನಿವೇಶಕ್ಕಾಗಿ

'ಅನಿಮಿಷ', ಕ್ರಾಸ್-7, ದುರ್ಗಿಗುಡಿ ಹಂತ 1, ಹೊನ್ನಾಳಿ - 577 217, ದಾವಣಗೆರೆ ಜಿಲ್ಲೆ
98801 30203



ಈ ವಚನದ ಸಾಲುಗಳಲ್ಲಡಗಿರುವ ಮೃದುಭಾವಗಳ ಬಿಡಿಬಿಡಿಸಿ ಹೃದಯಕ್ಕೆ ತಟ್ಟುವಂತೆ ಹಾಡಿದ್ದಾರೆ ವಾಣಿಜಯರಾಂ ಮತ್ತು ಕೆ.ಜೆ. ಯೇಸುದಾಸ್. ಸದಭಿರುಚಿ ಹಳೆಕಾವ್ಯ ಹೊಸ ಬದುಕಿಗು, ಆಧುನಿಕ ಪ್ರಸಂಗಕ್ಕೂ ಅರ್ಥಗರ್ಭಿತವಾಗಿ ಭಾವಪೂರ್ಣವಾಗಿ ಸಲ್ಲಬಲ್ಲ ತಾಳಿಕೆ ಗುಣ ಹೊಂದಿರುವ ಸಂಗತೀನ ಸಾಬೀತುಗೊಳಿಸಿದ್ದಾರೆ.

ಹಿಂಡನಗಲಿ ಅಂದರೆ ತನ್ನ ಬಾಂಧವ ಪಡೆಯಿಂದ ಬೇರ್ಪಟ್ಟು, ಹಿಡಿವಡೆದು ಅಂದರೆ ತನ್ನ ಬಂಧುಗಳ ಹಿಡಿತದಿಂದ ತಪ್ಪಿಸಿಕೊಂಡು ನೆಮ್ಮದಿ ಕಳಕೊಂಡು ಕಳವಳಿಸುವ ವಿಂಧ್ಯಾರಣ್ಯದ ಕುಂಜರ\ಆನೆ ತನ್ನ ಹಿತಹಸಿರ ತವರಬೀಡ ನೆನೆವಂತೆ ಅಕ್ಕ ಚೆನ್ನಮಲ್ಲಿಕನ ಆರ್ತಧ್ಯಾನದಲ್ಲಿರುವಳು. ಕೊಳದಲ್ಲೂರಿದ ಕಾಲ ಕೆಸರಲ್ಲಡಗಿದ್ದ ಮೊಸಳೆ ಕಚ್ಚಿ ಹಿಡಿದಾಗ ಆರ್ದ್ರ ಭಕ್ತಿಯಿಂದ ಶ್ರೀಹರಿಗೆ ಮೊರೆಯಿಟ್ಟ ಗಜೇಂದ್ರ ಮೋಕ್ಷದ ಕಾಡಾನೆ ನೆನಪಾಗತ್ತಿಲ್ಲಿ ಫಕ್ಕನೆ. ಬಂಧನಕ್ಕೆ ಬಂದಗಿಳಿ ಅಂದರೆ ಚಿಲಿಮಿಲಿಯೆಂದೋದುವ ಸಂತುಷ್ಟ ಸಂತೃಪ್ತ ವನ್ಯಗಿಳಿ ಅಲ್ಲವೆ ಅಲ್ಲ; ಮೋಜಿಗೊ ಮಾರಲಿಕ್ಕೊ ತಿನ್ನಲಿಕ್ಕೊ ಜೀತಕ್ಕಾಗೊ ಹಿಡಿದು ತಂದ ಬಡಪಾಯಿ; ಬಂಧನದಲ್ಲು ಎಂಥ ಸುಖವಿದೆಯಲ್ಲ ಎಂದು ತಾನಾಗಿಯೆ ಹುಡುಕಿ ಬಂದು ಸಿಕ್ಕಿಬಿದ್ದದ್ದಲ್ಲ ಇದು. ಅಕಸ್ಮಾತ್ ಬೇಡನ ಬಲೆಗೆಬಿದ್ದು ಹಂಗಿನರಮನೆ ಸೇರಿ ಮನುಷ್ಯರ ಸಟೆತೀಟೆ ಗುಟ್ಟು ಕೊಂಕು ಉರುಹೊಡೆದೊಪ್ಪಿಸಿ ದಾರಿತಪ್ಪಿದ ಮಾತಾಳಿ ಅರಗಿಣಿ ರಾಮನೂ ಅಲ್ಲ. ತನ್ನ ಮಧುರ ಬಂಧುಗಳ ಸುರಕ್ಷಿತ ಪರಿಸರಕ್ಕೆರವಾಗಿ ಬೇಟೆಗಾರನ ಮೋಸಕ್ಕೆ ಬಲಿಯಾಗಿ ನಗರದ ನರಕದಲ್ಲಿ ಬಿಕರಿಯಾಗಿ ಪಂಜರ ಬಂಧಿನಿಯಾಗಿ ಕೊರಗುತ್ತಿರುವ ದುರದೃಷ್ಟ ಜೀವಿ. ಅದಕ್ಕೆಂದೆ ಅಕ್ಕನ ಆತ್ಮಕ್ಕೆ ತಕ್ಕ ರೂಪಕ.

ಉತ್ತರ–ದಕ್ಷಿಣ ಭಾರತ ಭೂ ಖಂಡದ ಭೌಗೋಳಿಕ ಪ್ರಾದೇಶಿಕ ವಿಭಾಜಕದಂತೆ ಹಬ್ಬಿರುವ ವಿಂಧ್ಯಾಚಲ ದಾಟಿ ಬಂದ ಅಗಸ್ತ್ಯ ಮುನಿಯ ಸುಂದರ ದಂತಕತೆಗಳಿವೆ. ಈ ವಿಂಧ್ಯಾಚಲದ ನಿಬಿಡ ಕಾಡುಗಳು ಕಾಡಾನೆ ಹಿಂಡುಗಳ ನೆಚ್ಚಿನ ಬೀಡುಗಳು. ಈ ನಮ್ಮ ಆಧುನಿಕ ಯುಗದಲ್ಲು ಹೊಲಗದ್ದೆ ತೋಟ ತುಡಿಗೆ ಅಷ್ಟೆ ಅಲ್ಲದೆ ಹಳ್ಳಿನಗರಗಳಿಗೂ ನುಗ್ಗಿ ದಾಂಧಲೆಮಾಡಿ ನರಮೇಧದಲ್ಲಿ ತೊಡಗಿ ಜೀವ ನಡುಗಿಸುವ ಕಾಡಾನೆಗಳ ಕತೆ ಆಗಾಗ ಕೇಳುತ್ತಲೆ ಇರುತ್ತೇವಲ್ಲ. ಅವುಗಳ ಪೈಕಿ ಹಿಂಡಗಲಿ ದಿಕ್ಕು ತಪ್ಪಿಂಡಲೆವ ಧಾವಂತದಾನೆಯೂ, ಕ್ರೌರ್ಯ ಮೋಸದಿಂದ ಬಂಧಿತವಾದ ಗಿಳಿಯೂ ಇರುವುದೇನಚ್ಚರಿ? ಅಂಥವು ಹಿಂಡಗಲಿದ್ದು ತಮ್ಮದೆ ತಪ್ಪೊ ಅಥವ ದುರದೃಷ್ಟವೊ ತಿಳಿಯದೆ ತವಕಿಸುತ್ತಲೆ, ದಿಕ್ಕುತೋರಿ ತಾಯ್ಮಮತೆಯಿಂದ ಕಾಪಾಡಬಲ್ಲ ಹಿತೈಷಿ ಬಂಧುವ ನೆನೆನೆನೆದು ಪರಿತಪಿಸುವಂತೆ ಅಕ್ಕನಾತ್ಮ ಚೆನ್ನಮಲ್ಲಿಕಾರ್ಜುನಗಾಗಿ ಪರಿತಪಿಸುತ್ತಿದೆ. ಅವುಗಳಂತೆಯೆ ಹಾತೊರೆವ ಅಕ್ಕ ಚೆನ್ನಮಲ್ಲಿಕಾರ್ಜುನಾ ನಿನ್ನ ನಿಜದ ನಿಲುವ ತೋರಯ್ಯಾ, ಎದೆಯಾರೆ ನನ್ನ ಬರಸೆಳೆದಪ್ಪಯ್ಯಾ, ಏಕಾಕಿತನ ಭೀತಿಯ ಈ ಉಭಯಭಾವದ ವಿರಹದುರಿ ಅಡಗಿಸಯ್ಯಾ ಎಂದು ಬೇಡುತ್ತಿರುವಳು. ಕಂದಾ, ನೀನಿತ್ತ ಬಾ ಎಂದಾ ಜೀವದಾಯಿ ಯಾವಾಗ ಕರೆದಾನೊ, ಎಂದಿಗಾದರು ತನ್ನಂದದ ದಿವ್ಯಸ್ವರೂಪವ ತೋರಿಯಾನೊ ಎಂದೆಲ್ಲ ಕಾತರಿಸುತ್ತಿದೆ.

ಕೊನೆಸಾಲಿನ 'ನೀವು ನಿಮ್ಮಂದವ' ಸರ್ವನಾಮ ಪದಗಳ ಬಹುವಚನ 'ತೋರಯ್ಯಾ' ಕ್ರಿಯಾಪದದಲ್ಲಿ ಏಕವಚನಕ್ಕೆ ಹೊರಳುವುದೆ ವ್ಯಾಕರಣದಚ್ಚರಿ. ಇದು ನಮ್ಮ ಭಾಷಾಮುಗ್ಧ ಗ್ರಾಮೀಣರ ಸ್ವಚ್ಛಂದ ಸರಳತೆಯನ್ನೊ, ಅಕ್ಕನ ಕಾಲದ ಪಂಡಿತರು ವೈಯಾಕರಣಿಗಳು ಕನ್ನಡ ವಾಕ್ಯರಚನೆ ಕಟ್ಟುಪಾಡುಗಳ ಅಷ್ಟರಮಟ್ಟಿಗೆ ಸಡಿಲಿಸಿ ಮನ್ನಿಸಿದ್ದನ್ನೊ ಸೂಚಿಸುವಂತಿದೆ. ತಾಯಿಂದ ಬೇರ್ಪಟ್ಟು ತಲ್ಲಣಿಸುವ ಮಗುವಂತೆ, ಪುಣ್ಯಕೋಟಿ ಹಸುದಾಯಿಗಾಗಿ ಹಂಬಲಿಸುವ ಮುದ್ದುಗರುವಂತೆ ಗೋಚರಿಸುವಕ್ಕ ಚೆನ್ನಮಲ್ಲಾನುಭಾವದ ಮತ್ತೊಂದು ಮಜಲೇರಿರುವಳೆ ಈ ವಚನದ ಮುಖೇನ?



ಶಿವಭಕ್ತಿಯುಳ್ಳವಂಗೆ;
ಕಾಮ ಬೇಡ, ಕ್ರೋಧ ಬೇಡ, ಲೋಭ ಬೇಡ,
ಮೋಹ ಬೇಡ, ಮದ ಬೇಡ, ಮತ್ಸರ ಬೇಡ.
ಶಿವಭಕ್ತಿಯುಳ್ಳವಂಗೆ;
ಕಾಮ ಬೇಕು, ಕ್ರೋಧ ಬೇಕು, ಲೋಭ ಬೇಕು
ಮೋಹ ಬೇಕು, ಮದ ಬೇಕು, ಮತ್ಸರ ಬೇಕು.
ಬೇಕೆಂಬುದಕ್ಕಾವಗುಣ?
ಕಾಮ ಬೇಕು ಲಿಂಗದಲ್ಲಿ, ಕ್ರೋಧ ಬೇಕು ಕರಣಂಗಳಲ್ಲಿ
ಲೋಭ ಬೇಕು ಪಾದೋದಕ ಪ್ರಸಾದದಲ್ಲಿ
ಮೋಹ ಬೇಕು ಗುರುಲಿಂಗ ಜಂಗಮದಲ್ಲಿ
ಮದ ಬೇಕು ಶಿವಾಚಾರದಿಂದ ಘನವಿಲ್ಲವೆಂದು.
ಮತ್ಸರಬೇಕು ಹೊನ್ನು ಹೆಣ್ಣು ಮಣ್ಣಿನಲ್ಲಿ. ಇಂತೀ
ಷಡ್ಗುಣವಿರಬೇಕು.
ಬೇಡವೆಂಬುದಕ್ಕಾವುದು ಗುಣ?
ಕಾಮ ಬೇಡ ಪರಸ್ತ್ರೀಯರಲ್ಲಿ, ಕ್ರೋಧ ಬೇಡ ಗುರುವಿನಲ್ಲಿ
ಲೋಭ ಬೇಡ ತನುಮನದಲ್ಲಿ,
ಮದ ಬೇಡ ಶಿವಭಕ್ತರಲ್ಲಿ, ಮತ್ಸರ ಬೇಡ ಸಕಲ ಪ್ರಾಣಿಗಳಲ್ಲಿ,
ಇಂತೀ ಷಡ್ಗುಣವನರಿದು ಮೆರೆಯಬಲ್ಲಡೆ
ಆತನೇ ಸಹಜ ಸದ್ಭಕ್ತ ಕಾಣಾ ಕೂಡಲ ಚೆನ್ನಸಂಗಮದೇವಾ.





## ವಚನ ರಸಪ್ರಶ್ನೆ ಸ್ಪರ್ಧೆ

### ವಚನ ರಸಪ್ರಶ್ನೆ~೩೬ರ ಸರಿಯುತ್ತರಗಳು

೧. (ಇ) ಮೇಳ ೨. (ಆ) ಡಾ. ಗುರುರಾಜ ಕರ್ಜಗಿ ೩(ಈ) ಕಲ್ಯಾಣದೆಡೆಗೆ
೪.(ಅ) ಹೊಡೆಹುಲ್ಲ ಬಂಕಣ್ಣ ೫.(ಇ) ಹಡಪದ ಅಪ್ಪಣ್ಣನ ಪುಣ್ಯಸ್ತ್ರೀ ಲಿಂಗಮ್ಮ

'ಮಹಾಮನೆ'ಯ "ವಚನ ರಸಪ್ರಶ್ನೆ-೩೬"ರ ಸರಿ ಉತ್ತರವನ್ನು ಯಾರೂ ಕಳಿಸಿಲ್ಲದ ಕಾರಣದಿಂದ ಈ ಸಂಚಿಕೆಯ ಬಹುಮಾನವನ್ನು ಯಾರಿಗೂ ಕೊಡಲಾಗಿಲ್ಲ.

### ವಚನ ರಸಪ್ರಶ್ನೆ ~ ೩೭ರ ಪ್ರಶ್ನೆಗಳು

೧. 'ಗುಪ್ತಮಂಚಣ್ಣನವರ' ಅಂಕಿತ ನಾಮ ಯಾವುದು?
(ಅ) ಸಿಮ್ಮಲಿಗೆಯ ಚೆನ್ನರಾಮ (ಆ) ಸಿದ್ಧಸೋಮನಾಥಲಿಂಗ
(ಇ) ನಾರಾಯಣಪ್ರಿಯ ರಾಮನಾಥ (ಈ) ರಾಮನಾಥ

೨. 'ನಲ್ಲನ ಕೂಡುವ ಸುಖಭೋಗ' – ಎನ್ನುವ ಸಾಲು ಯಾರ ವಚನದಲ್ಲಿ ಬರುತ್ತದೆ?
(ಅ) ಉರಿಲಿಂಗದೇವ (ಆ) ಆಯ್ದಕ್ಕಿ ಲಕ್ಕಮ್ಮ
(ಇ) ಅವಸರದ ರೇಕಣ್ಣ (ಈ) ಆದಯ್ಯ

೩. 'ಹರವಸ' ಪದದ ಅರ್ಥ:
(ಅ) ವ್ಯಾಪಾರಿ (ಆ) ಪ್ರಾಣ
(ಇ) ಗುರಾಣಿ (ಈ) ಪರವಶ

೪. 'ಮಹಾಲಿಂಗ ತ್ರಿಪುರಾಂತಕ' – ಯಾರ ಅಂಕಿತ ನಾಮ?
(ಅ) ಕಿಲಾರದ ಭೀಮಣ್ಣ (ಆ) ಕಿನ್ನರಿ ಬೊಮ್ಮಯ್ಯ
(ಇ) ಕಾಮಾಟದ ಭೀಮಣ್ಣ (ಈ) ಕೂಗಿನ ಮಾರಯ್ಯ

೫. 'ಒರಟ' ಎನ್ನುವ ಅರ್ಥ ಬರುವ ಶಬ್ದ ಇವುಗಳಲ್ಲಿ ಯಾವುದು?
(ಅ) ಬಿದ್ದು (ಆ) ಮಿನುಗು
(ಇ) ಬಿರುಬ (ಈ) ಬರುಬ

ಈ ಐದೂ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ಬರೆದು ಅಂಚೆಯ ಮೂಲಕ ಮಾತ್ರ ಕಳಿಸಬೇಕು. ಐದೂ ಉತ್ತರಗಳು ಸರಿಯಾಗಿರುವ ಪತ್ರಗಳನ್ನು ಮಾತ್ರ ಸ್ಪರ್ಧೆಗೆ ಪರಿಗಣಿಸಲಾಗುವುದು. ಇಂಥ ಪತ್ರಗಳಲ್ಲಿ ಲಾಟರಿಯ ಮೂಲಕ ಇಬ್ಬರ ಉತ್ತರಗಳನ್ನು ಆಯ್ದು, ಅವರಿಗೆ ಪುಸ್ತಕ ರೂಪದಲ್ಲಿ ಬಹುಮಾನವನ್ನು ಕಳಿಸಲಾಗುವುದು. ನಿಮ್ಮ ಉತ್ತರಗಳು ಬರಲು ಪ್ರತಿ ತಿಂಗಳ ೨೦ನೆಯ ದಿನಾಂಕವು ಕೊನೆಯದಾಗಿರುತ್ತದೆ.

**ಅಂಚೆಯ ಮೂಲಕ ಮಾತ್ರ ನಿಮ್ಮ ಉತ್ತರಗಳು ತಲುಪಬೇಕಾದ ವಿಳಾಸ**

ಅಧ್ಯಕ್ಷರು, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, "ವಚನ ರಸಪ್ರಶ್ನೆ", ೧ನೆಯ ಮುಖ್ಯರಸ್ತೆ, ಜಗದ್ಗುರು ಶ್ರೀ ಶಿವರಾತ್ರೀಶ್ವರ ವೃತ್ತ, ೮ನೆಯ ವಿಭಾಗ, ಜಯನಗರ, ಬೆಂಗಳೂರು-೫೬೦೦೭೦.

# ಅಗಣಿತ

ಡಾ. ಅಮರೇಶ ನುಗಡೋಣಿ

ಮಡಕೆ ದೈವ, ಮೊರದೈವ, ಬೀದಿಯ ಕಲ್ಲು ದೈವ
ಹಣಿಗೆ ದೈವ, ಬಿಲ್ಲನಾರಿದೈವ, ಕಾಣಿರೋ
ಕೊಳಗ ದೈವ, ಗಿಣ್ಣಿಲು ದೈವ, ಕಾಣಿರೋ
ದೈವ ದೈವವೆಂದು ಕಾಲಿಡಲಿಂಬಿಲ್ಲ
ದೈವನೊಬ್ಬನೆ ಕೂಡಲಸಂಗಮದೇವ

– ಬಸವಣ್ಣ

ಈ ವಚನಕ್ಕೂ 'ಉಳ್ಳವರು ಶಿವಾಲಯವ ಮಾಡುವರು' ಎನ್ನುವ ವಚನಕ್ಕೂ ಸಂಬಂಧವಿದೆ ಎಂದು ಕಾಣುತ್ತಿದೆ. ದೇವಾಲಯವನ್ನು ನಿರಾಕರಿಸಿದ್ದು ಮತ್ತು ದೇಹವನ್ನೇ ದೇವಾಲಯ ಮಾಡಿ ಪರ್ಯಾಯವನ್ನು ಹೇಳಿದ ಬಸವಣ್ಣ, ಇದು ಬಹುದೊಡ್ಡ ಕ್ರಾಂತಿಯೆಂದು ಹೇಳದೇ ಇರಲಾಗದು. ಸಂಪೂರ್ಣವಾಗಿ ವೈದಿಕ ವ್ಯವಸ್ಥೆ ಇರುವ ಕಾಲದಲ್ಲಿ ದೇವಾಲಯವನ್ನು ನಿರಾಕರಿಸಿದ್ದು ಸಣ್ಣ ಮಾತಲ್ಲ. ಎದೆಗಾರಿಕೆ ಬೇಕು. ಬಹು ಜನಸಮುದಾಯಗಳಿಗೆ ದೇವಾಲಯದ ಪ್ರವೇಶ ಇರಲಿಲ್ಲ. ಇದ್ದವರಿಗೂ ಅದರಿಂದ ಪ್ರಯೋಜನವಿರಲಿಲ್ಲ. ಇದಕ್ಕಿಂತ ಮುಖ್ಯವಾಗಿ ದೇವಸ್ಥಾನ ಎಂಬ ಸಂಸ್ಥೆ ಸುಲಿಯುವ ಸಂಸ್ಥೆಯಾಗಿತ್ತು. ಬಡ್ಡಿ ಪಡೆಯುವ ಕೇಂದ್ರವಾಗಿತ್ತು. ಅಕ್ರಮಗಳ ಸ್ಥಳವಾಗಿತ್ತು. ಸಾಲ ನೀಡಿ ಅಲ್ಲಿ ದೇವರು ಇರುವುದಕ್ಕೆ ಸಾಧ್ಯವಿರಲಿಲ್ಲವೆಂಬುದು ಬಸವಣ್ಣನ ಖಚಿತ ನಿಲುವಾಗಿತ್ತು. ದೇವಾಲಯ ನಿರಾಕರಣೆಯಿಂದ ರಾಜಪ್ರಭುತ್ವಕ್ಕೆ, ಧರ್ಮಪ್ರಭುತ್ವಕ್ಕೆ, ಪುರೋಹಿತರಿಗೆ ಭಾರಿ ಹೊಡೆತ ಬಿದ್ದಿತು.

ಜನಸಾಮಾನ್ಯರಿಗೆ ಚೂರು ಪ್ರಯೋಜನವಿಲ್ಲದ ದೇವಸ್ಥಾನ ನಿರಾಕರಿಸಿ, ಬಸವಣ್ಣ ದೇಹವನ್ನು ದೇವಸ್ಥಾನ ಮಾಡಿಕೊಳ್ಳಲು ಹೇಳಿದ. ಇದು ಸಾಮಾನ್ಯರು ತಲುಪುವಂಥದ್ದಾಗಿರಲಿಲ್ಲ. ಸಾಧನೆಗೆ ಮೀರಿದ್ದು ಆಗಿತ್ತು. ಅದಕ್ಕಾಗಿಯೇ ಲಿಂಗವನ್ನು ನೀಡಿದ. ಲಿಂಗದೀಕ್ಷೆ – ಶಿವದೀಕ್ಷೆಯನ್ನು ನೀಡುವ ಮೂಲಕ ದೇವಾಲಯದ ಕಡೆ ನೋಡದಂತೆ ತಡೆ ಹಿಡಿದ ಅನ್ನಬಹುದು. ಆದರೆ ಕೆಳಸಮುದಾಯಗಳು, ದುಡಿಯುವ ಜೀವಿಗಳು, ಇವರು ಕಾಯಕ ಜೀವಿಗಳಾಗುವ ಮೊದಲು ಜನಪದ ದೈವಗಳನ್ನು ಪೂಜಿಸುತ್ತಿದ್ದರು. ದುಡಿವ ವರ್ಗ ತಮ್ಮ

'ಸೂರು', ಎಂ.ಪಿ. ಪ್ರಕಾಶ ನಗರ, ಮಾರ್ಕಂಡೇಶ್ವರ ಡಿಇಡಿ ಕಾಲೇಜು ಹತ್ತಿರ,
ಹೊಸಪೇಟೆ – ೫೮೩ ೨೦೧ ಬಳ್ಳಾರಿ ಜಿಲ್ಲೆ ಮೊ: ೯೪೪೮೧೫ ೭೯೪೫೯



ದುಡಿಮೆಗೆ ನೆರವಾಗುವ ಸಲಕರಣೆಗಳನ್ನು ದೈವ ಸಮಾನವಾಗಿ ಕಂಡು ಪೂಜಿಸುವುದು ಸಂಪ್ರದಾಯವಾಗಿತ್ತು. ವೃತ್ತಿನಿರತರಿಗೆ ಮಡಕೆ, ಮೊರ, ಬೀದಿಯಕಲ್ಲು, ಹಣಿಗೆ, ಬಿಲ್ಲನಾರಿಗಳೇ ದೈವಗಳಾಗಿದ್ದವು. ಹಬ್ಬ, ಅಮವಾಸ್ಯೆ, ಹುಣ್ಣಿಮೆಗಳಲ್ಲಿ ಈ ಸಲಕರಣೆಗಳನ್ನು ಪೂಜಿಸುತ್ತಿದ್ದರು. ಲೋಕದ ತುಂಬ ಈ ದೈವಗಳದೇ ಹಾವಳಿಯಿತ್ತು.

ಶಿವಾಲಯವನ್ನು ನಿರಾಕರಿಸಿದ ಮೇಲೆ, ಈ ದೈವಗಳನ್ನು ನಿರಾಕರಿಸಲೇಬೇಕಾಗಿತ್ತು. ದುಡಿಯುವ ವರ್ಗವು ಕಾಯಕ ಜೀವಿಯಾಗಿ ಪರಿವರ್ತನೆ ಹೊಂದಿದರು. ಕಾಯಕವನ್ನೇ ಆಧ್ಯಾತ್ಮವನ್ನಾಗಿ ಮಾಡಿಕೊಂಡರು. ಕಾಯಕವೇ ದೈವವಾಯಿತು. ದೇವಾಲಯ ಸಂಸ್ಕೃತಿಯನ್ನು ಈ ಕಾಯಕ ಜೀವಿಗಳು ಮೊದಲಿನಿಂದ ಮಾನ್ಯ ಮಾಡಿರಲಿಲ್ಲ. ದೇವಾಲಯ ಸಂಸ್ಕೃತಿಗೆ ಹೊಂದಿಕೊಂಡಿದ್ದ ಮೇಲ್ವರ್ಗಗಳಿಗೆ ದೇವಾಲಯವನ್ನು ನಿರಾಕರಿಸಲು ಕಷ್ಟವಾಗಿರಬಹುದು. ಕಾಯಕ ಜೀವಿಗಳಿಗೆ ಕಷ್ಟವಾಗಿರಲಿಕ್ಕಿಲ್ಲ.

ಜನಪದ ಸಂಸ್ಕೃತಿಯಲ್ಲಿ ಒಳ್ಳು, ಒನಕೆ, ಕೊಳಗ, ಮಗಿ ಎಲ್ಲ ದೈವಗಳಾಗಿದ್ದವು. ಈ ಕೆಳವರ್ಗಗಳ ಈ ದೈವವನ್ನು ನಿರಾಕರಿಸಲಾಯಿತು. ಇದು ತಪ್ಪು ಎಂಬ ಅಧ್ಯಯನಗಳು ನಡೆದಿವೆ. ಕಾಲಿಡಲು ತೆರಪಿಲ್ಲದ ದೈವಗಳು ಶಿವಾಲಯಗಳಾಗಿ ಪರಿವರ್ತನೆ ಹೊಂದುವ ಸಾಧ್ಯತೆಯಿತ್ತು. ವರ್ತಮಾನದಲ್ಲಿ ರೈತ ಉಳಿಮೆಯ ಎತ್ತುಗಳನ್ನು ಪೂಜಿಸುತ್ತಿರುವಂತೆ ಈಗ ಟ್ರ್ಯಾಕ್ಟರ್ ಅನ್ನು ಪೂಜಿಸುತ್ತಾನೆ. ಲಾರಿ ಮೂಲಕ ಲಾರಿಯನ್ನು ಪೂಜಿಸುತ್ತಾನೆ. ಯಂತ್ರಗಳು ದೈವಗಳಾಗಿ ನಿಂತಿವೆ. ಬಸವಣ್ಣನ ಮಾತು ಆತನಿಗೇ ಹಗೆಯಾಯಿತು. ದೇವಾಲಯವನ್ನು ನಿರಾಕರಿಸಲು ಕರೆ ಮಾಡಿದ ಬಸವಣ್ಣ ಜನಪದ ದೈವಗಳನ್ನು ಪೂಜಿಸದಿರಲು ಹೇಳುವುದು ಅನಿವಾರ್ಯವಾಗಿತ್ತು. ಆದರೆ ಲೋಕದಲ್ಲಿ ಇಂಥ ಜನರು ದೇವಾಲಯಗಳು ಸಾಲದೆಂದು ತಮ್ಮ ತಮ್ಮ ಮನೆಗಳಲ್ಲಿಯೇ ದೇವಾಲಯ ಮಾಡಿಕೊಂಡಿದ್ದಾರೆ. ಮಡಕೆ, ಮೊರ, ಹಣಿಗೆ, ಕೊಳಗ ಮೊದಲಾದವುಗಳ ಪೂಜೆ ಸಲ್ಲದು ಎಂದು ಸೂಚಿಸಿದ್ದರೂ, 'ದೇವನೊಬ್ಬ' ಅಂದೂ. ವಾಹನಗಳು, ಯಂತ್ರಗಳು ಪೂಜೆಗೆ ಒಳಗಾಗಿವೆ. ಇದು ಎಂಥ ವ್ಯಂಗ್ಯ?

□

ವಿಚಾರವೆಂಬುದು ಸಂದೇಹಕ್ಕೊಳಗು ನೋಡಾ
ವಿಚಾರಿಸುವನ್ನಕ್ಕರ ನೀ ನಾನೆಂಬುದನೆತ್ತ ಬಲ್ಲೆ ಮರುಳೆ
ವಾಙ್ಮನೋತೀತವಾದ ಘನವು ವಿಚಾರಕ್ಕೆ ನಿಲುಕುವುದೇ
ಗೊಹೇಶ್ವರಲಿಂಗವು ತನ್ನ ತಿಳಿದು
ನೋಡಿಹೆನೆಂಬವರ ವಿಚಾರವೆಂಬ ಬಲೆಯುಲ್ಲಿ ಕೆಡಹಿದನು

# ಅನುಭಾವದ ಅಭಿವ್ಯಕ್ತಿಯಾಗಿ ವಚನಗಳು

ಪ್ರೊ. ಓ.ಎಲ್. ನಾಗಭೂಷಣಸ್ವಾಮಿ

ಅನುಭಾವ ಮತ್ತು ಭಾಷೆ – ಭಾಗ ೨

**ಕ**ನ್ನಡದಲ್ಲಿ ಅಲ್ಲದಿದ್ದರೂ ಜಗತ್ತಿನ ಇತರ ಎಡೆಗಳ ವಿದ್ವಾಂಸರು ಅನುಭಾವ ಮತ್ತು ಭಾಷೆಗಳ ಸಂಬಂಧವನ್ನು ಕುರಿತು ನಡೆಸಿರುವ ವಿವಿಧ ಅಧ್ಯಯನಗಳು ಹಲವು ಮುಖ್ಯವಾದ ಸಂಗತಿಗಳನ್ನು ನಮ್ಮ ಗಮನಕ್ಕೆ ತಂದಿವೆ. ಅನುಭಾವವನ್ನು ವ್ಯಕ್ತಪಡಿಸುವುದಕ್ಕೆ ಭಾಷೆ ಅಸಮರ್ಥ ಅನ್ನುವ ಪ್ರತಿಪಾದನೆ ಕೇವಲ ತೋರಿಕೆಯದ್ದು, ಅನುಭಾವಿಗಳು ಭಾಷೆಯನ್ನು ಬಳಸುವ ಕ್ರಮದಲ್ಲಿ ಕೆಲವು ಮುಖ್ಯ ಲಕ್ಷಣಗಳನ್ನು ವಿದ್ವಾಂಸರು ಗುರುತಿಸಿದ್ದಾರೆ.

೧. ನಮಗೆ ಇಂದು ದೊರೆತಿರುವ ಅನುಭಾವ ಸಂಪತ್ತು, ಅನುಭಾವಿಗಳ ಜ್ಞಾನ ಸಂಪತ್ತು ಭಾಷೆಯ ರಚನೆಗಳ ಮೂಲಕವೇ ದೊರೆತಿವೆ. ನಾವು ಯಾವುದನ್ನು ಜಗತ್ತಿನ ಅನುಭಾವೀ ಪರಂಪರೆ ಎನ್ನುತ್ತೇವೋ ಅದು ನಿಜವಾಗಿ ಬಗೆಬಗೆಯ ಪಠ್ಯಗಳ ದಾಖಲೆ. ಪಠ್ಯಗಳಲ್ಲಿ ವ್ಯಕ್ತವಾಗುವುದನ್ನು ಮೀರಿ ಅನುಭಾವಿಯ ಮನಸ್ಥಿತಿಯನ್ನು ಅರಿಯುವ ಬೇರೆ ಯಾವ ದಾರಿಯೂ ನಮಗಿಲ್ಲ. ಅನುಭಾವವನ್ನು ಅರಿಯಲು ಬಯಸುವ ನಮ್ಮ ವೈಯಕ್ತಿಕ ಪ್ರಯತ್ನಗಳಿಗೂ, ಸಾಧನೆಗೂ ಅನುಭಾವಿಗಳು ಬಳಸಿರುವ ಭಾಷೆಯೇ ಆಧಾರ.

೨. ಈ ಎಲ್ಲ ಭಾಷಿಕ ರಚನೆಗಳು, ಅದರ ಭಿನ್ನ ರೂಪಗಳು ವ್ಯಾಖ್ಯಾನಶೀಲ ರಚನೆ (ಇಂಟರ್‌ಪ್ರೆಟಿವ್ ಸ್ಟ್ರಕ್ಚರ್)ಗಳನ್ನು ಒಳಗೊಂಡಿವೆ. ಅನುಭಾವಿಗಳ ನುಡಿಗಳನ್ನು ಕುರಿತು ನಾವು ಆಡುವ ಮಾತುಗಳೆಲ್ಲ ವ್ಯಾಖ್ಯಾನಗಳೇ ಆಗಿರುವಂತೆ ಅನುಭಾವಿಗಳ ನುಡಿಯಲ್ಲೂ ವ್ಯಾಖ್ಯಾನ ಲಕ್ಷಣವಿದೆ. ಅನುಭಾವಿಗಳಾಡುವ ನುಡಿಯೂ ಕೂಡ ಅವರಿಗಾದ ಅನುಭವದ ವ್ಯಾಖ್ಯಾನವೇ ಆಗಿರುತ್ತದೆ.

೩. ಅನುಭಾವ ಸಾಹಿತ್ಯದಲ್ಲಿ ಬಗೆಬಗೆಯ ದೃಷ್ಟಿಕೋನಗಳಿರುತ್ತವೆ. 'ನಾನು' ಎಂಬ ಉತ್ತಮಪುರುಷ ದೃಷ್ಟಿಕೋನದಿಂದ ಅನುಭಾವಿಯು ತನಗಾದದ್ದನ್ನು ಪ್ರಸ್ತುತಪಡಿಸುವುದು ಕಾಣುತ್ತದೆ; ತನಗಾದ ಅನುಭವಗಳನ್ನು ಅನುಭಾವಿ ತಾನೇ ಸ್ವತಃ ವ್ಯಾಖ್ಯಾನಿಸುವುದಿದೆ; ಅನುಭಾವಿಯ ಧರ್ಮಕ್ಕೇ ಸೇರಿದ, ಅಥವ ಇತರ ಧರ್ಮಗಳಿಗೆ ಸೇರಿದ ಜನ ವ್ಯಾಖ್ಯಾನಿಸಿದ್ದು ಕೂಡ ಇದೆ. ಇವೆಲ್ಲವುಗಳ ಮೊತ್ತವನ್ನು, ಜಟಿಲವಾದ ಹೆಣಿಗೆಯನ್ನು ಅನುಭಾವ ಸಾಹಿತ್ಯವೆನ್ನುತ್ತೇವೆ. ಉದಾಹರಣೆಗೆ ಹೇಳುವುದಾದರೆ ಅಲ್ಲಮಪ್ರಭುಗಳ ವಚನ ಹೇಗೆ

ನಂ. ೯೯೯, ಹಿಮಾಲಯ, ೫ನೆ ಮುಖ್ಯರಸ್ತೆ, ಅರವಿಂದ ನಗರ, ಮೈಸೂರು ೫೭೦ ೦೨೩
ಮೊ: ೯೪೪೮೦೩ ೭೯೮೩೭



ಅನುಭಾವ ಸಾಹಿತ್ಯವೋ ಆ ವಚನಗಳಿಗೆ ಕಲ್ಲುಮಠದ ಪ್ರಭುದೇವರು ಬರೆದಿರುವ ವ್ಯಾಖ್ಯಾನವೂ ಅನುಭಾವ ಸಾಹಿತ್ಯವೇ ಆಗಿದೆ.

೪. ಅನುಭಾವ ಸಾಹಿತ್ಯವು ಹಲವು ರೂಪಗಳನ್ನು ತಾಳಬಹುದು. ಜೀವನ ಚರಿತ್ರೆ, ಧರ್ಮಗ್ರಂಥಗಳ ವಿವರಣೆ ವ್ಯಾಖ್ಯಾನ, ಗಾದೆ, ತಾತ್ವಿಕ ಚಿಂತನೆ, ಮತಧರ್ಮಶಾಸ್ತ್ರ, ಕವಿತೆ, ಪ್ರಾರ್ಥನೆ, ವಾಗ್ವಾದ, ಬೋಧನೆ ಇತ್ಯಾದಿ ಹಲವು ರೂಪಗಳನ್ನು ಅನುಭಾವ ಸಾಹಿತ್ಯದಲ್ಲಿ ಕಾಣಬಹುದು. ಇಂಥ ಒಂದೊಂದು ಪ್ರಕಾರವೂ ಅಥವ ರೂಪವೂ ಭಾಷೆಯನ್ನು ಬೇರೆ ಬೇರೆಯ ರೀತಿಗಳಲ್ಲಿ, ಬೇರೆ ಬೇರೆಯ ಉದ್ದೇಶಗಳಿಗಾಗಿ ಬಳಸುತ್ತವೆ. ಅವುಗಳ ಅಧ್ಯಯನಕ್ಕೆ ಅಗಾಧ ಪ್ರಮಾಣದ ಸಿದ್ಧತೆ ಬೇಕಾಗುತ್ತದೆ. 'ಜಾಗತಿಕ' ಎಂದು ಕರೆಯಬಹುದಾದ ಕಾವ್ಯರೂಪದ ಅನುಭಾವ ಅಭಿವ್ಯಕ್ತಿಯನ್ನು ನಮಗಿರುವ ಕಾವ್ಯಾಭ್ಯಾಸದ ಹಿನ್ನೆಲೆಯಿಂದ ತಕ್ಕ ಮಟ್ಟಿಗೆ ಅರಿಯಬಹುದು. ಕನ್ನಡದ ವಚನ ಸಾಹಿತ್ಯದಲ್ಲಿ ಅನುಭಾವ ಎಂಬ ಮಾತನ್ನು ಸಮಾನಮನಸ್ಕರ, ಸಮಾನ ಅನುಭವ ಉಳ್ಳವರ ನಡುವೆ ನಡೆಯುವ ಸಂವಾದ ಎಂಬ ಅರ್ಥದಲ್ಲಿ ಬಳಸಿರುವುದನ್ನು ಗಮನಿಸಬಹುದು. ಈ ಸಂವಾದದ ಭಾಷಿಕ ಸ್ವರೂಪದ ಅರಿವು ಕೂಡ ವಚನಕಾರರಿಗೆ ಸ್ಪಷ್ಟವಾಗಿಯೇ ಇತ್ತು.

*****

ಇನ್ನು ಮುಂದೆ ಅನುಭಾವ ಎಂಬ ಸಂವಾದದಲ್ಲಿ ಭಾಷೆ ಬಳಕೆಯಾಗುವ ಬಗೆಗಳನ್ನು ಗುರುತಿಸಲು ಪ್ರಯತ್ನಿಸೋಣ.

ವರ್ಣಿಸಲಾಗದ ಅನುಭವವನ್ನು ಅನುಭಾವಿಯು ತನ್ನದೇ ಆಪ್ತ ಭಾಷೆಯಲ್ಲಿ ಹೇಳಿಕೊಂಡದ್ದು ಅನುಭಾವದ ನುಡಿ. ಈ ಮಾತು ನಿಜವಾದರೂ ಅನುಭವವೇ ಭಾಷಿಕ ಪ್ರಭಾವಗಳಿಗೆ ಒಳಗಾದದ್ದು ಅಲ್ಲವೇ ಎಂಬ ಪ್ರಶ್ನೆಯ ಚರ್ಚೆಯೂ ನಡೆದಿದೆ. ನಮಗೆ ಅನುಭವವಾಗುತ್ತದೆ, ಅದನ್ನು ಹೇಳಲು ತಕ್ಕ ಭಾಷಾರೂಪಗಳನ್ನು ಹುಡುಕಿಕೊಳ್ಳುತ್ತೇವೆ ಅನ್ನುವುದು ನಮಗೆಲ್ಲ ಪರಿಚಿತವಾಗಿರುವ ನಿಲುವು. ಭಾಷೆಗೂ ಅನುಭವಕ್ಕೂ ಇನ್ನೊಂದು ಬಗೆಯ ಸಂಬಂಧವೂ ಇರುತ್ತದೆ. ಭಾಷೆಯಲ್ಲಿ ನಮಗೆ ಲಭ್ಯವಿರುವ ಪದ, ವಾಕ್ಯದ ನಮೂನೆ ಇತ್ಯಾದಿಗಳು ನಮಗಾದ ಅನುಭವದ ಸ್ವರೂಪವನ್ನೂ ನಿಯಂತ್ರಿಸುತ್ತವೆ. ಅನುಭವ ಮತ್ತು ಭಾಷೆ ಎಂದು ಕಲ್ಪಿಸಿಕೊಂಡಿರುವಂತೆಯೇ ಭಾಷೆ ಮತ್ತು ಅನುಭವ ಎಂದು ಇನ್ನೊಂದು ದಿಕ್ಕಿನಿಂದಲೂ ನೋಡುವ ಅಗತ್ಯವಿದೆ. ಇದನ್ನು ಇನ್ನೂ ಸರಳವಾಗಿ ಪದಗಳಿಲ್ಲದೆ ಆಲೋಚನೆಗಳೂ ಇಲ್ಲ, ಅನುಭವಗಳೂ ಇಲ್ಲ ಎಂದು ಸೂತ್ರರೂಪದಲ್ಲಿ ಹೇಳುವವರಿದ್ದಾರೆ. ಭಾಷೆಯೊಂದು ಯಾವ ಬಗೆಯ ಅಭಿವ್ಯಕ್ತಿಗೆ ಅನುವು ಮಾಡಿಕೊಡಬಲ್ಲುದೋ ಅಂಥ ಅನುಭವಗಳು ಮಾತ್ರ 'ಅನುಭವ'ಗಳೆನಿಸಿಕೊಳ್ಳುತ್ತವೆ. ಅನುಭಾವವು ಕೂಡ ಭಾಷೆಯ ಮೂಲಕವೇ ವ್ಯಕ್ತವಾಗುತ್ತದೆಯಾದ್ದರಿಂದಲೇ ಅದು ಬೆಲೆಯುಳ್ಳ ಅನುಭವವಾಗಿ ನಮಗೆ ಕಾಣುತ್ತದೆ. ಅನುಭವವೆನ್ನುವುದು ಆಗಲೇ ನಾವು ಕಲಿತಿರುವ, ನಮಗೆ ಪರಿಚಿತವಾಗಿರುವ ಭಾಷಾ ವಿನ್ಯಾಸಗಳಿಗೆ ಅಳವಟ್ಟದ್ದು; ಆ ನಂತರ ಅದನ್ನು ವ್ಯಕ್ತಪಡಿಸಬೇಕು ಏಕೆ ಎಂಬ

ಉದ್ದೇಶಕ್ಕೆ ಒಳಪಟ್ಟವು; ಆ ನಂತರ ಇತರರಿಗೂ ಅರಿವಾಗುವಂತೆ ಭಾಷೆಯಲ್ಲಿ ವ್ಯಕ್ತವಾಗುವಂಥವು. ಹೀಗೆ ಅನುಭಾವದ ನುಡಿಗೆ ಭಾಷಿಕ ಸಂದರ್ಭವನ್ನು ಕಲ್ಪಿಸಿ ಅರಿಯುವ ಪ್ರಯತ್ನವನ್ನು ನಡೆಸುವುದು ಸಾಧ್ಯವಿದೆ. ಅನುಭಾವೀ ಪರಂಪರೆಗಳಲ್ಲಿ ಭಾಷೆಯು ವಹಿಸುವ ಪಾತ್ರವನ್ನು ತಿಳಿಯಲು ಇದು ಒಂದು ದಾರಿ.

ಒಂದು ಉದಾಹರಣೆಯನ್ನು ನೋಡೋಣ. ಸುಪ್ರಸಿದ್ಧವಾದ ಈ ವಚನವನ್ನು ಎಲ್ಲರೂ ಕೇಳಿದ್ದೇವೆ. ಪರಿಚಿತ ಎಂಬ ಕಾರಣಕ್ಕೇನೇ ಅದರ ಗಹನತೆ ನಮ್ಮ ಅರಿವಿಗೆ ಬರದಿರುವ ಸಾಧ್ಯತೆಯೂ ಇದೆ. ತನಗೂ ತನ್ನ ಇಷ್ಟದೈವಕ್ಕೂ ಅಥವಾ ಇಡೀ ಸೃಷ್ಟಿಗೂ ಇರುವ ಸಂಬಂಧವನ್ನ ಕುರಿತು ಮೂಡುವ ಬೆರಗು ತಲ್ಲಣಗಳು ಈ ವಚನದಲ್ಲಿವೆ.

ಎತ್ತಣ ಮಾಮರ ಎತ್ತಣ ಕೋಗಿಲೆ
ಎತ್ತಣಿಂದೆತ್ತ ಸಂಬಂಧವಯ್ಯಾ
ಬೆಟ್ಟದ ಮೇಲಣ ನೆಲ್ಲಿಯ ಕಾಯಿ
ಸಮುದ್ರದೊಳಗಣ ಉಪ್ಪು
ಎತ್ತಣಿಂದೆತ್ತ ಸಂಬಂಧವಯ್ಯಾ
ಗುಹೇಶ್ವರಲಿಂಗಕ್ಕೆಯೂ ನಮಗೆಯೂ
ಎತ್ತಣಿಂದೆತ್ತ ಸಂಬಂಧವಯ್ಯಾ [ಸಂಪುಟ ೨, ವಚನ ೫೯]

ಈ ವಚನಕ್ಕೆ ಸಂಪಾದಕರು ಬಳಸುವ ಆಶ್ಚರ್ಯಸೂಚಕ, ಪ್ರಶ್ನಾರ್ಥಕ, ಪೂರ್ಣವಿರಾಮದಂಥ ಲೇಖನ ಚಿಹ್ನೆಗಳೂ ನಮಗೆ ಗೊತ್ತಿರದ ಹಾಗೆ ನಾವು ಕಟ್ಟಿಕೊಳ್ಳುವ ಅರ್ಥವನ್ನು ಪ್ರಭಾವಿಸುತ್ತವೆ. ಸ್ವಲ್ಪ ಗಮನಕೊಟ್ಟು ನೋಡಿದರೆ ಸಂಬಂಧವೇ ಇಲ್ಲದಂತೆ ಕಾಣುವ ಮಾವಿನ ಮರ–ಕೋಗಿಲೆ, ಸಮುದ್ರದ ಉಪ್ಪು–ಬೆಟ್ಟದ ನೆಲ್ಲಿಯ ಕಾಯಿಗಳಿಗೆ ಅದು ಹೇಗೆ ಸಂಬಂಧ ಹುಟ್ಟಿದೆ, ಸಂಬಂಧ ಇದೆಯೋ, ಇಲ್ಲವೋ ಎಂಬ ಪ್ರಶ್ನೆಗಳೆಲ್ಲ ಕಾಡುವುದಕ್ಕೆ ಶುರು ಮಾಡುತ್ತವೆ. ಸಂಬಂಧ ಇಲ್ಲವೆಂಬಂತೆ ತೋರುತ್ತದೆ ಆದರೆ ನಿಜವಾಗಿ ಸಂಬಂಧ ಇದೆ, ನನಗೂ ಗುಹೇಶ್ವರನಿಗೂ ಇಲ್ಲದಂತೆ ಕಾಣುವ ಆದರೆ ಇರುವ ಸಂಬಂಧದ ಅಂಥದೇ ಅನ್ನುವ ಬೆರಗು ಇಲ್ಲಿದೆ. ಇಡೀ ಸೃಷ್ಟಿಯಲ್ಲಿ ಗಮನಕ್ಕೇ ಬರದಂತೆ ಹಾಸುಹೊಕ್ಕಾಗಿರುವ ಸಂಬಂಧದ ಅರಿವಿಗೆ ಬಂದದ್ದನ್ನು ಈ ವಚನ ಹೇಳುತ್ತಿದೆ. ನಮಗೆ ಯಾರಿಗಾದರೂ ಕಣ್ಣೆದುರು ಸುಮ್ಮನೆ ಮಲಗಿರುವ ಬೆಕ್ಕಿಗೂ ನಮಗೂ ಸಂಬಂಧವಿದೆ ಎಂದು ಕ್ಷಣಾರ್ಧ ಅನ್ನಿಸಿದರೆ ಆಗುವಂಥ ಅನುಭವ ಇದು. ಎತ್ತಣ ಎಂಬ ಪದದ ಪುನರುಕ್ತಿ, ಸಂಬಂಧ ಎಂಬ ಪದದ ಪುನುರುಕ್ತಿ, ವಾಕ್ಯರಚನೆಯ ಸ್ವರೂಪ ಇವೆಲ್ಲ ಸೇರಿ ಆನುಭಾವಿಕ ಎಂದು ಕರೆಯಬಹುದಾದ ಸಂಬಂಧದ ಸ್ವರೂಪ ನಮ್ಮ ಅನುಭವಕ್ಕೆ ಬರುತ್ತದೆ. ಈ ವಚನವನ್ನು ಬೇರೆ ಯಾವ ರೀತಿಯಲ್ಲ ಸಂಯೋಜಿಸಿದರೂ ಪರಿಣಾಮ ಬೇರೆಯೇ ಆಗುತ್ತದೆ. ಅಂದರೆ ಅನುಭಾವವನ್ನ ತಿಳಿಸುವುದಕ್ಕೆ ಭಾಷೆ ಹೇಗೆ ಬೇಕೋ ಹಾಗೆಯೇ ಭಾಷೆಯ ಸ್ವರೂಪವೂ ಅನುಭಾವದ ಸ್ವರೂಪವನ್ನ ನಿರ್ಧರಿಸುತ್ತದೆ, ಎನ್ನಬಹುದಲ್ಲವೇ?





ಅನುಭಾವಿಗಳು ಮಾತ್ರವಲ್ಲ, ಸಾಮಾನ್ಯರಾದ ನನ್ನಂಥವರು ಕೂಡ ನಿಜವಾಗಿ ಏನಾದರೂ ಹೇಳಬೇಕೆಂದು ಬಯಸಿದಾಗ ದೊಡ್ಡ ತೊಡಕು ಎದುರಾಗುತ್ತದೆ. ಅದು ನಮ್ಮ ಭಾಷೆಯ ಬಳಕೆಯಿಂದಲೇ ಮೂಡಿದ ತೊಡಕು. ಭಾಷೆಯನ್ನು ನಾವು ಕೇವಲ ವಿವರಣಾತ್ಮಕ ಉಪಕರಣವಾಗಿ ಬಳಸಿ ಅದೇ ಅಭ್ಯಾಸಕ್ಕೆ ಒಳಗಾಗಿರುತ್ತೇವೆ. ಅಂದರೆ ಲೋಕದಲ್ಲಿ ಇರುವ ವಸ್ತುಗಳನ್ನು ಭಾಷೆ ಖಚಿತವಾಗಿ ವಿವರಿಸಬಲ್ಲದು ಎಂಬ ನಂಬಿಕೆ ನಮ್ಮಲ್ಲಿ ಮೂಡಿಕೊಂಡಿರುತ್ತದೆ. 'ನನ್ನ ರೂಮಿನಲ್ಲಿ ಟೇಬಲ್ಲಿನ ಮೇಲೆ ಇರುವ ದಪ್ಪ ಪುಸ್ತಕ ತೆಗೆದುಕೊಂಡು ಬಾ' ಎಂದು ಸ್ವಲ್ಪ ದೊಡ್ಡ ಮಗುವಿಗೆ ಹೇಳಬಹುದಾದ ವಾಕ್ಯದಲ್ಲಿ ಇರುವ ಒಂದೊಂದು ಪದಕ್ಕೂ ಸಂವಾದಿಯಾದ ವಸ್ತುವೊಂದು ಲೋಕದಲ್ಲಿ ಇರುತ್ತದೆ. ನಾನು ಇದ್ದೇನೆ, ನನ್ನ ಕೋಣೆ ಅಂತ ಒಂದಿದೆ, ಅಲ್ಲಿ ಟೇಬಲ್ಲು ಅನ್ನುವುದು ಇದೆ, ಅದರ ಮೇಲೆ ದಪ್ಪ ಪುಸ್ತಕವೂ ಇದೆ, ಅದನ್ನು ನೀನು ಅಂದರೆ ನನ್ನ ಮೊಮ್ಮಗ ಸಮರ್ಥ ಈ ವಾಕ್ಯ ಕೇಳಿಸಿಕೊಂಡು ನನಗೆ ತಂದುಕೊಡುತ್ತಾನೆ. ಇದು ಅರ್ಥದ ಲೋಕ, ಒಂದೊಂದು ಪದಕ್ಕೂ ಖಚಿತವಾದ ಅರ್ಥವಿರುವ ಲೋಕ. ಆದರೆ ಭಾಷೆ ಮತ್ತು ಲೋಕದ, ಭಾಷೆ ಮತ್ತು ಅನುಭವದ ಸಂಬಂಧ ಇಷ್ಟು ಸಲೀಸಲ್ಲ, ಸರಳವೂ ಅಲ್ಲ. ಇದೊಂದೇ ರೀತಿಯ ಸಂಬಂಧ ಭಾಷೆಗೂ ಲೋಕಕ್ಕೂ ಇರುವುದಾದರೆ ನನ್ನ ರೂಮಿನ ಹಾಗೆ ಅಲ್ಲೆಲ್ಲೋ ಸ್ವರ್ಗವೂ ಇರಬೇಕು, ದಪ್ಪ ಪುಸ್ತಕದ ಹಾಗೆ ದೇವರೂ ಇರಬೇಕು, ಇಲ್ಲಿಂದ ರೂಮಿಗೆ ಹೋದ ಹಾಗೆ ಅಲ್ಲಿರುವ ಸ್ವರ್ಗಕ್ಕೆ ಹೋಗಿ ದೇವರನ್ನು ಕಾಣಬಹುದಿತ್ತು. ನಮಗೆ ಆದ ನೋವನ್ನೋ ದುಃಖವನ್ನೋ ತೀರ ಖಚಿತವಾಗಿ ಹೇಳಬಹುದಾಗಿತ್ತು. ಕೊನೆಯ ಪಕ್ಷ ನನಗೆ ನೋವಾಯಿತು ಎಂದಾಗ ನಿಮಗೂ ನೋವಾಗಿದ್ದರೆ ಆ ನೋವಿನ ನೆನಪು, ಛಾಯೆ ನಿಮ್ಮ ಮನಸಿನಲ್ಲೂ ಸುಳಿದು ನನಗೇನಾಗುತ್ತಿದೆ ಅನ್ನುವುದನ್ನು ಸ್ಥೂಲವಾಗಿ ಕಲ್ಪಿಸಿಕೊಳ್ಳಬಹುದು. ಆದರೆ ಅಖಂಡತೆ, ಪೂರ್ಣತೆ, ದೈವಿಕ ಅನುಭವ ಇಂಥ ಪದಗಳು ಏನು ಹೇಳಲು ಹೆಣಗುತ್ತವೋ ಅವು ಯಾವುವೂ ಪುಸ್ತಕ ಮತ್ತು ಮೇಜು ಉದಾಹರಣೆಯಂಥ ಲೋಕೋಪಯೋಗಿ ಭಾಷೆಯ ವಲಯದ್ದೂ ಅಲ್ಲ, ನನಗೆ ನೋವಾಯಿತು ಅನ್ನುವಂಥ ಭಾವೋಪಯೋಗಿ ವಲಯದ್ದೂ ಅಲ್ಲ. ನಮ್ಮ ಗ್ರಹಿಕೆ ಅನ್ನುವುದು ಹೆಚ್ಚೆಂದರೆ ಈ ಎರಡು ವಲಯಗಳಲ್ಲಿ ಅಡ್ಡಾಡಿ ಅಭ್ಯಾಸವಾಗಿರುವಂಥದ್ದು.

'ಮನಸಿನಲ್ಲೂ ಪಡೆಯಲಾಗದೆ ಎಲ್ಲಿಂದ ನುಡಿಗಳೂ ಮರಳುತ್ತವೋ' ಅನ್ನುವ ಅರ್ಥದ ತೈತ್ತರೀಯ ಉಪನಿಷತ್ತಿನ ಮಾತನ್ನು ನೆನೆದುಕೊಳ್ಳಿ. ಇದು ದೈವಿಕತೆ, ಅನುಭಾವ ಇವಕ್ಕೆ ಮಾತ್ರ ಸಂಬಂಧಿ ಮಾತಲ್ಲ. ಯಾವುದೇ ನಿಜ ಅನುಭವಕ್ಕೂ ಅನ್ವಯವಾಗುವಂಥದ್ದು. 'ನಿಜ ಅನುಭವ'ವೆಂದರೆ ನಮಗೆ ಪರಿಚಿತವಾದ ಹೆಸರು, ಲೇಬಲ್ಲುಗಳು ಇಲ್ಲದೆ ಇಡಿಯಾಗಿ ಆಗುವ ಅನುಭವ. ಭಾಷೆ ನಮ್ಮನ್ನು ಎಷ್ಟು ಆವರಿಸಿಕೊಂಡಿದೆಯೆಂದರೆ ನಮಗಾಗುವ ಎಲ್ಲ ಅನುಭವಗಳಿಗೂ ಹೆಸರು ಕೊಡುವ ಅಭ್ಯಾಸ ಆಗಿಬಿಟ್ಟಿದೆ, ಹಾಗೆ ಹೆಸರು ಕೊಟ್ಟು, ಹೆಸರು ತಿಳಿದು ಅರ್ಥವಾಯಿತೆಂದು ನೆಮ್ಮದಿ ಪಡೆಯುವ ಅಭ್ಯಾಸವಾಗಿದೆ. ಹಾಗೆ ನೋಡಿದರೆ

ಯಾವ ಅನುಭವಕ್ಕೂ ಹೆಸರಿಲ್ಲ. ಹೆಸರು ಕೊಟ್ಟು ಅದನ್ನು ಅರ್ಥಕ್ಕೆ ಇಳಿಸಿರುತ್ತೇವೆ. ಹೆಸರಿಲ್ಲದ ಅನುಭವವನ್ನು ಮಾತು ಮುಟ್ಟಲಾರದು, ಮಾತು ಮುಟ್ಟಲಾರದ್ದನ್ನು ಮನಸ್ಸೂ ಪಡೆಯಲಾರದು. ಅದಕ್ಕೆಂದೇ ಭಾಷೆಯೇ ನಮ್ಮ ಅನುಭವದ ಸ್ವರೂಪವನ್ನೂ ತಿದ್ದುತ್ತದೆ ಎಂದು ಹೇಳಿದ್ದು.

ಈ ಎಲ್ಲ ಸಂಗತಿಗಳನ್ನೂ ಅಲ್ಲಮವಚನವೊಂದು ಹೀಗೆ ಹೇಳಿದೆ:

ಅರಿದರಿದು ಅರಿವು ಬಂಜೆಯಾಯಿತ್ತು.
ಮರೆ ಮರೆದು ಮರಹು ಬಂಜೆಯಾಯಿತ್ತು.
ಗುಹೇಶ್ವರನೆಂಬ ಶಬ್ದ ಸಿನೆ ಬಂಜೆಯಾಯಿತ್ತು [ಸಂಪುಟ ೨, ವಚನ ೬೨೫]

ಗುಹೇಶ್ವರ ಎಂಬ ಶಬ್ದ ಸಿನೆ, ಅಂದರೆ ಸಂಪೂರ್ಣ, ಬಂಜೆ ಎಂಬ ಮಾತು ಗಮನಿಸಿ. ಭಾಷೆಯ ಮೂಲಕ ಪಡೆದ ಅರಿವು, ಅಭ್ಯಾಸವಾಗಿರುವ ಅರಿವು, ಗುಹೇಶ್ವರ ಅಥವ ದೇವರು ಎಂಬ ಪದ, ಮಾತು, ನುಡಿ ಎಲ್ಲವೂ ಏನನ್ನೂ ಸೃಷ್ಟಿಸಲಾಗದ ಬಂಜೆತನಕ್ಕೆ ಒಳಗಾಗಿವೆ. [ಮುಂದುವರೆಯುವುದು]



**ಕಾಳಮೇಘಮಂದಿರದ ಜಾಲಾಂಧರದ ಮನೆಯಲ್ಲಿ**
**ಒಬ್ಬ ಸೂಳೆಯ ಬಾಗಿಲಲ್ಲಿ**
**ಎಂಬತ್ತನಾಲ್ಕು ಲಕ್ಷ ಮಿಂಡಗಾರರು**
**ಅವಳ ಸಂಗದಲ್ಲಿ ಇರಲಮ್ಮರು**
**ಅವಳು ತಾವೇ ಬರಲೆಂದು ಕರೆಯದಿಹಳು**
**ಅವಳಿಗೆ ಯೋನಿ ಹಿಂದು ಅಂಡ ಮುಂದು**
**ಕಣ್ಣು ಅಂಗಾಲಿನಲ್ಲಿ ತಲೆ ಮುಂಗಾಲಿನಲ್ಲಿ**
**ಕಿವಿ ಭುಜದಲ್ಲಿ ಕೈ ಮಂಡೆಯ ಮೇಲೆ**
**ಮೂಗು ಹಣೆಯಲ್ಲಿ ಮೂಗಿನ ದ್ವಾರ ಉಂಗುಷ್ಠದಲ್ಲಿ**
**ಬಸುರು ಬಾಯಲ್ಲಿ ನಡೆವಳು ತಲೆ ಮುಂತಾಗಿ ಕಾಲು ಮೇಲಾಗಿ**
**ಅವಳ ಕೂಡುವ ಪರಿಯ ಹೇಳಾ**
**ಅಲೇಖನಾದ ಶೂನ್ಯ ಗೆದ್ದೆಯಲ್ಲಾ ಕಲ್ಲಿನ ಹೊಟ್ಟೆಯ ಮರೆಯಲ್ಲಿ**





## ಅಮುಗೆ ರಾಯಮ್ಮ

ಡಾ. ಕೆ.ವೈ. ನಾರಾಯಣಸ್ವಾಮಿ

ಉತ್ತಮ ತೇಜಿಗೆ ಚಬುಕಿನಲ್ಲಿ ತೆಗೆವರುಂಟೆ
ಪಟ್ಟಣಕ್ಕೆ ಒಡೆಯನಾದ ಬಳಿಕ ಜಾತಿಗೋತ್ರವನರಸಲುಂಟೆ
ಪರಮ ಸುಜ್ಞಾನಿಗೆ ಪ್ರಾಣದ ಹಂಗುಂಟೆ
ಲಿಂಗವನಪ್ಪಿದ ಶರಣನ ಕಂಡಕಂಡವರು ಜರಿದಡೆ ಸಂದೇಹವುಂಟೆ
ಇಹಲೋಕದವರು ಜರಿದರೆಂದು ವಿಪರೀತಗೊಳ್ಳಲೇಕೆ
ಅಮುಗೇಶ್ವರ ಲಿಂಗವನರಿದ ಶರಣಂಗೆ
ಆರು ಹರಸಿದಡೇನು ಆರು ಹಳಿದಡೇನು.

ಇದು ಅಮುಗೆ ರಾಯಮ್ಮ ಎಂಬ ವಚನಕಾರ್ತಿಯ ಹೆಸರಿನಲ್ಲಿರುವ ವಚನ. ಅಮುಗೇಶ್ವರ ಲಿಂಗ ಎಂಬ ಅಂಕಿತವಿರುವ ಇನ್ನೂ ನಾಲ್ಕಾರು ವಚನಗಳನ್ನು ಸಂಕೀರ್ಣ ವಚನ ಸಂಪುಟದಲ್ಲಿ ಸಂಗ್ರಹಿಸಿ ಕೊಡಲಾಗಿದೆ. 'ಅಮುಗ' ಎನ್ನುವ ಪದವನ್ನು ಹುಡುಕಿ ಸಿಗದೆ ನಿರಾಸೆಯಾಯಿತು. ವಚನಗಳನ್ನು ಅರ್ಥೈಸಿಕೊಳ್ಳಲು ಅಂಕಿತ ನಾಮಗಳಲ್ಲಿ ಬಳಕೆಯಾಗಿರುವ ಪೂರ್ವ ಪದಗಳನ್ನು ಬಿಡಿಸಿಕೊಳ್ಳುವುದು ರೂಢಿ. ಇಷ್ಟದೇವರನ್ನು ತಮ್ಮ ವೃತ್ತಿ ಮತ್ತು ತಮ್ಮ ಸ್ಥಳನಾಮಗಳ ಜೊತೆ ಸಮೀಕರಿಸಿ ಅಂಕಿತಗಳನ್ನು ತಳವರ್ಗದ ವಚನಕಾರರು ಇಟ್ಟುಕೊಳ್ಳುವುದು ವಾಡಿಕೆ. ಅಂಬಿಗರ ಚೌಡಯ್ಯ, ಮಾತುಳಂಗ ಮಧುಕೇಶ್ವರ ಇತ್ಯಾದಿ. ಇದು ವೃತ್ತಿಯ ಘನತೆಯನ್ನು ಸಾರ್ವಜನಿಕವಾಗಿ ಸ್ಥಾಪಿಸುವ ವಿಧಾನವಾಗಿಯೂ ಅಧ್ಯಯನ ಮಾಡಬಹುದು. 'ಅಮುಗೆ' 'ಅಮುಗಿ' ಪ್ರಯೋಗಗಳು ಸ್ಥಳ ನಾಮವಾಗಿರಬಹುದು ಎನ್ನಿಸುತ್ತದೆ.

ಈ ವಚನವು ಕೂಡ ರಾಚನಿಕವಾಗಿ ಕನ್ನಡ ವಚನಗಳ ರಚನಾ ವಿನ್ಯಾಸವನ್ನೇ ಹೋಲುತ್ತದೆ. ಪ್ರಶ್ನೆ, ಸಂವಾದ ಮತ್ತು ನಂಬಿಕೆಯನ್ನು ದೃಢಗೊಳಿಸಿಕೊಳ್ಳುವ ವಿನ್ಯಾಸವನ್ನು ಈ ವಚನವು ಅನುಸರಿಸಿದೆ. ವಚನಕಾರರು ಮೂರ್ತವೂ ಇಂದ್ರಿಯಾನುಭವದಿಂದಲೇ ತಮ್ಮ ಉದಾಹರಣೆಗಳನ್ನು ತೆಗೆದುಕೊಂಡು ಅಮೂರ್ತವೂ ಅನುಭಾವವೂ ಆದ ಸಂಗತಿಗಳನ್ನು ನಿರೂಪಿಸುತ್ತಾರೆ. ವಚನಕಾರರು ಇಹವನ್ನು ಕರ್ತಾರನ ಪ್ರಯೋಗಶಾಲೆ ಎಂದು ಕರೆದುಕೊಂಡಿದ್ದು ಕೂಡ ಈ ಹಿನ್ನೆಲೆಯಲ್ಲಿಯೇ. ವಚನಕಾರರ ಪ್ರಕಾರ ಪರವೆಂಬುದು

೪೭, ಎನ್.ಆರ್. ಲೇಔಟ್, ೫ನೆ ಮೇನ್, ೯ನೆ ಕ್ರಾಸ್, ವಿರಾಟ ನಗರ, ಬೊಮ್ಮನಹಳ್ಳಿ,
ಬೆಂಗಳೂರು ೫೬೦೦೬೮ ೯೭೩೯೦ ೦೭೧೨೭

ಕೂಡ ಇಹದಲ್ಲಿ ಸಂಭವಿಸುವ ಅನುಭಾವಿ ಲೋಕವದು. ಪರ ಹೀಗೆ ಇಹದ ಭಾಗವಾದ್ದರಿಂದ ಇಹ ಪರಗಳ ನಡುವೆ ತುಂಡಾಗದ ಸಂವಹನ ಇದ್ದೇ ಇತ್ತು.

ಈ ವಚನ ಪೂರಕ ಪ್ರಶ್ನೆಗಳ ಮೂಲಕ ಲೋಕಚಿಂತನೆಯನ್ನು ಮಂಡಿಸಲು ಪ್ರಯತ್ನಿಸುತ್ತಿದೆ. ಈ ಪ್ರಶ್ನೆಗಳಾದರೂ ಸಿದ್ಧ ಉತ್ತರಗಳನ್ನು ಒಡಲೊಳಗೆ ಇಟ್ಟುಕೊಂಡದ್ದಾಗಿವೆ. ಶ್ರೇಷ್ಠ ಜಾತಿಯ ಕುದುರೆಯನ್ನು ಚಾಟಿಯಿಂದ ಹೊಡೆಯುವುದುಂಟೆ. ಈ ವಾಕ್ಯವು ಕುದುರೆಯ ಸಾಮರ್ಥ್ಯಕ್ಕೆ ಒತ್ತುಕೊಟ್ಟರೆ ಅದು ಚಾವಟಿಯಿಂದ ಹೊಡೆಸಿಕೊಳ್ಳಲಾರದು ಎನ್ನುವ ಅರ್ಥ ಬರುವಂತೆ ಕುದುರೆ ಉತ್ತಮ ಜಾತಿಗೆ ಸೇರಿರುವುದರಿಂದ ಅದನ್ನು ದಂಡಿಸಬಾರದು ಎನ್ನುವ ಅರ್ಥವೂ ಹೊರಡುವುದುಂಟು. ಈ ಎರಡೂ ರೀತಿಯಲ್ಲಿ ಈ ವಾಕ್ಯವನ್ನು ಓದಬಹುದು. ಮುಂದಿನ ಸಾಲಿಗೆ ಪಟ್ಟಣಕ್ಕೆ ಒಡೆಯನಾದ ಬಳಿಕ ಆತನ ಕುಲಗೋತ್ರಗಳನ್ನು ಹುಡುಕಬಾರದು ಎನ್ನುವ ಅರ್ಥ ಹೊರಡುವ ಹಾಗೆಯೇ ಪಟ್ಟಣಕ್ಕೆ ದೊರೆಯಾದ ವ್ಯಕ್ತಿಯು ಕೂಡ ತನ್ನ ಆಡಳಿತದಲ್ಲಿ ಕುಲಗೋತ್ರಗಳನ್ನು ಲಕ್ಷಿಸಿ ಆಡಳಿತ ಮಾಡಬಾರದು ಎನ್ನುವ ಅರ್ಥವನ್ನು ಹೊಳೆಸುತ್ತದೆ. ಮೊದಲೆರಡು ಸಾಲುಗಳಲ್ಲಿ ಮಾತ್ರ ಹೀಗೆ ಅರ್ಥವನ್ನು ಪಲ್ಲಟಿಸಲು ಸಾಧ್ಯವಾಗುವಂಥ ರಚನೆಯಿದೆ. ಈ ಎರಡು ಸಾಲುಗಳಲ್ಲಿ ಗುಣ ಮತ್ತು ಅಧಿಕಾರವನ್ನು ಪಡೆದುಕೊಳ್ಳಬೇಕಾದ ಸಾಧ್ಯತೆಯ ಸೂಚನೆಯಿರುವಂತೆ ಹಾಗೆ ಪಡೆದ ತಕ್ಷಣದಲ್ಲಿ ಸಾಮಾಜಿಕವೂ ಅಸಜವೂ ಆದ ತರತಮಗಳು ನಗಣ್ಯಗೊಳ್ಳುವುದನ್ನು ಈ ಸಾಲುಗಳು ಸೂಚಿಸುವಂತೆ ಕಾಣುತ್ತದೆ. ಇದು ಸಮಾಜವು ಉಳ್ಳವರ ಮತ್ತು ಬಡವರ ಬಗೆಗೆ ತೋರುವ ಇಬ್ಬಂದಿ ವರ್ತನೆಯನ್ನು ನಿರೂಪಿಸುತ್ತದೆ. ಆದರೆ ಹೀಗೆ ಪಡೆದುಕೊಂಡ ಅಧಿಕಾರವನ್ನು ಜಾರಿಗೆ ಅಡ್ಡಿ ಇಲ್ಲವಾದರೂ ಜಾತಿ ಕುರುಹು ಪೂರ್ಣ ನಾಶವಾಗುವುದಿಲ್ಲ. ಅದು ಮರೆಗಿದ್ದು ನಂತರ ಮತ್ತೆ ಕಾಣಿಸಿಕೊಳ್ಳುವ ಪ್ರಕ್ರಿಯೆ ಇಂದಿಗೂ ಚಾಲ್ತಿಯಲ್ಲಿದೆ.

ಈ ವಚನದ ಮುಂದುವರೆದ ಸಾಲುಗಳಲ್ಲಿ ಅರ್ಥಸ್ಪಷ್ಟತೆಯಿದೆ. ತಾನು ನಿರೂಪಿಸುವ ಸಂಗತಿಯಲ್ಲಿ ನಿರೂಪಕರಿಗೆ ಗೊಂದಲವಿಲ್ಲದಿರುವುದನ್ನು ಕಾಣಬಹುದು. ಈ ಸಾಲುಗಳು ವ್ಯಕ್ತಿಯ ಒಳಗನ್ನು ನಿರೂಪಿಸುವತ್ತ ಚಲಿಸುತ್ತವೆ. ಪರಮ ಸುಜ್ಞಾನಿಗೆ ಪ್ರಾಣದ ಹಂಗುಂಟೆ ಎನ್ನುವ ಮಾತು ಶರಣತ್ವದ ಸ್ಥಿತಿಯಲ್ಲಿ ಮರಣದ ಭಯವನ್ನು ಗೆದ್ದ ಶರಣರ ಮನದ ದೃಢತೆಯನ್ನು ವಿವರಿಸುವಂತೆ ತೋರುವುದು. ಅಲ್ಲದೆ ಸಾವು ಅನುಭಾವಿ ಪ್ರಕ್ರಿಯೆಯ ಭಾಗವಾಗಿರುವ ಅರಿವನ್ನು ಸೂಚಿಸುವಂತಿದೆ ಹಾಗೂ ಈ ಸಾಲು ಶರಣರಿಗೆ ಮರಣವೇ ಮಹಾನವಮಿ ಎನ್ನುವ ನಿಲುವನ್ನು ನೆನಪಿಸುತ್ತದೆ.

ಮುಂದಿನ ಸಾಲುಗಳು ಶರಣನಾದವನ ಕುರಿತು ಲೋಕ ತೋರುವ ದೂಷಣೆ ಮತ್ತು ಅಸಡ್ಡೆಯ ವರ್ತನೆಗಳನ್ನು ವಿವರಿಸುತ್ತದೆ. ಶರಣತ್ವವನ್ನು ಸ್ವೀಕರಿಸಿದವರನ್ನು ಅಪಮಾನಿಸುವ ಪ್ರವೃತ್ತಿಗಳು ಚಾಲ್ತಿಯಲ್ಲಿದ್ದವು ಎಂಬ ಚಾರಿತ್ರಿಕ ಸತ್ಯವನ್ನು ಈ ಸಾಲುಗಳು ವಿವರಿಸುತ್ತವೆ. ಸಮಾಜದ ಇಂತಹ ವರ್ತನೆಗಳನ್ನು ನಿತ್ಯ ಎದುರುಗೊಳ್ಳಬೇಕಿದ್ದ ಶರಣರು ಎದುರಿಸಬೇಕಾದ ಕ್ರಮವನ್ನು ಈ ಸಾಲು ಮಂಡಿಸುತ್ತದೆ. ಇಲ್ಲಿ ಕಂಡಕಂಡವರು ಎನ್ನುವ





ಮಾತಿನ ಪ್ರಯೋಗದಲ್ಲಿರುವ ವ್ಯಂಗ್ಯವನ್ನು ಗಮನಿಸಿದರೆ, ಲೋಕದ ಕಣ್ಣು ಕಂಡರೂ ಮನಸ್ಸು ಕಾಣದಿರುವ ವೈರುಧ್ಯವನ್ನು ಈ ಸಾಲು ಕಟ್ಟಿಕೊಡಲು ಪ್ರಯತ್ನಿಸುತ್ತದೆ. ಲೌಕಿಕದ ದಂದುಗಗಳಲ್ಲಿ ಮಗ್ನರಾಗಿರುವ ಭವಿಗಳು ಶರಣತ್ವವನ್ನು ಅದರ ಆಚಾರವನ್ನು ಸಂದೇಹಿಸುವುದು ಸಹಜ. ಅಂತಹ ಪ್ರಸಂಗಗಳಿಂದ ಶರಣರು ತಾವು ಅಪ್ಪಿರುವ ತತ್ವದ ಆಚರಣೆಯಲ್ಲಿ ಅಧೀರತೆಯನ್ನು ಅನುಭವಿಸಬಾರದು ಎನ್ನುವ ಮಾರ್ಗದರ್ಶನವೂ ಈ ವಚನದಲ್ಲಿದೆ. ಕೊನೆಯ ಸಾಲುಗಳು ಶರಣರು ಬೆಳೆಸಿಕೊಳ್ಳಬೇಕಾದ ಸಮಚಿತ್ತವನ್ನು ಗುರಿಯಾಗಿಯೂ ನಂಬಿ ನಡೆಯಬೇಕಾದ ದಾರಿಯಾಗಿಯೂ ಮಂಡಿಸುತ್ತದೆ. ಸ್ತುತಿನಿಂದೆಗಳಿಗೆ ಸ್ಪಂದಿಸದೆ ಶಿವನಲ್ಲಿ ಮನಸ್ಸನ್ನು ನೆಲೆಗೊಳಿಸುವ ಶರಣತ್ವವನ್ನು ಆಗು ಮಾಡಿಕೊಳ್ಳುವತ್ತ ಈ ವಚನದ ಅರ್ಥ ಚಲಿಸುತ್ತದೆ. ಹೀಗೆ ಈ ವಚನವು ಶರಣರು ಮತ್ತು ಲೋಕಸಂಬಂಧವನ್ನು ನಿರೂಪಿಸುವ ರಚನೆಯಾಗಿದೆ.

ವಚನಗಳ ಬೃಹತ್ ನಿರೂಪಣೆಗಳಲ್ಲಿ ಮಹಿಳೆಯರ ವಚನಗಳಿಗೆ ವಿಶೇಷವಾದ ಸ್ಥಾನವಿದೆ. ಆ ವಿಶೇಷತೆ ಹೆಣ್ಣು ಸಹಜವಾಗಿ ಪಡೆದುಕೊಂಡಿರುವ ಲೋಕದೃಷ್ಟಿಯಿಂದ ದಕ್ಕಿದ್ದು. ಅಕ್ಕ ಸತ್ಯಕ್ಕ ಅಥವಾ ಸೂಳೆ ಸಂಕವ್ವನ ವಚನಗಳಲ್ಲಿ ಹೆಣ್ಣು ಲೋಕದ ಎಲ್ಲ ಬಗೆಯ ರಚನೆ ಮತ್ತು ಅಧಿಕಾರಗಳನ್ನು ಗಂಡಸರಿಗಿಂತ ಭಿನ್ನವಾಗಿ ಕಂಡಿರುವ ಗುರುತುಗಳು ಕಾಣಸಿಗುತ್ತವೆ. ಆ ದೃಷ್ಟಿಯಿಂದ ನೋಡಿದರೆ ಈ ವಚನ ವಿಶೇಷವಾದುದಲ್ಲ. ಇಲ್ಲಿ ರಾಯಮ್ಮನ ಹೆಸರು ತೆಗೆದು ಯಾವುದೇ ಪುರುಷ ವಚನಕಾರನ ಹೆಸರು ಹಾಕಿದರೂ ಅರ್ಥೈಸುವುದಕ್ಕೆ ಯಾವುದೇ ಬಾಧಕವಿಲ್ಲ. ಕುರುಹುಗಳ ನಿರಾಕರಣೆ ಶರಣತ್ವದ ಗುರಿಯಾದರೂ ಇಂಥ ವಚನ ನಿರೂಪಣೆಗಳು ಭಾಷಿಕ ಪ್ರಯೋಗದಲ್ಲಿ ಹೆಣ್ಣಿನ ಅನುಭವವನ್ನು ಇಲ್ಲವಾಗಿಸಿದಂತೆ ಪುರುಷ ದನಿಯನ್ನು ಇಲ್ಲವಾಗಿಸಿಲ್ಲ ಎನ್ನುವುದು ನಾವು ವಚನಗಳನ್ನು ತಿಳಿಯುವಾಗ ಹಾಕಿಕೊಳ್ಳಬೇಕಾದ ಪ್ರಶ್ನೆಯಂತೂ ಹೌದು.

□

ಒಡೆಯರನೊಡಗೊಂಡು ಬಂದು
ಕೈಗಡಿಗೆಯ ನೀರ ಕೈಯ್ಯಲ್ಲಿ ಕೊಟ್ಟು
'ಒಡೆಯರೆ! ಕಾಲ ತೊಳಕೋ!'
ಎಂಬುವನ ಮನೆಗೆ ಅಡಿಯಿಡಲಾಗದಯ್ಯಾ ಮೃಡಶರಣರು.
ಒಡಲಿಚ್ಛೆಗೆ ಬಡಮನವ ಮಾಡಿ
ಹೊಕ್ಕುಂಬವರ ಎನ್ನೆಡೆಗೆ ತೋರದಿರಾ, ರಾಮನಾಥ.

# ವಚನ–ವೈಚಾರಿಕತೆ–ವೈಜ್ಞಾನಿಕ ಮನೋಭಾವ

ಸುಮಂಗಲಾ ಎಸ್. ಮುಮ್ಮಿಗಟ್ಟಿ

**ಹ**ನ್ನೆರಡನೆಯ ಶತಮಾನದ ಶರಣರ ವಚನಗಳನ್ನು ಅವಲೋಕಿಸುತ್ತಾ ಹೋದಂತೆ, ಆಧುನಿಕ ವಿಜ್ಞಾನದ ಹಲವಾರು ಅವಿಷ್ಕಾರಗಳಿಗೆ ಅವು ತಾಳೆಯಾಗುವುದನ್ನು ನಾವು ಕಾಣಬಹುದಾಗಿದೆ. ಅಂದಿನ ದಿನಗಳಲ್ಲಿ ಪ್ರಾಯೋಗಿಕ ವಿಜ್ಞಾನ ಸಾಧ್ಯವಾಗಿರಲಿಲ್ಲವಾದರೂ ಕಣ್ಣಿಗೆ ಗೋಚರವಾದುದನ್ನು ತರ್ಕಿಸುವ ಅವರ ವಿಚಾರ ಶೈಲಿ ವಿಜ್ಞಾನದ ಒಂದು ವಿಧಾನವೂ ಹೌದು. ಕಣ್ಣಿಗೆ ಕಾಣುವುದರ ಆಧಾರವನ್ನು ಹಿಡಿದು ಅಗೋಚರವಾದುದನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸುವ, ಅದಕ್ಕೆ ಸಮೀಕರಿಸಿ ನೋಡುವ, ಮತ್ತು ಕಲ್ಪಿಸಿಕೊಳ್ಳುವ ಬಗೆಗಳು ಸೈದ್ಧಾಂತಿಕ ವಿಜ್ಞಾನದ ವಿಧಾನವಾಗಿದ್ದು, ಪ್ರಶ್ನಿಸದೇ ಯಾವ ಆಚರಣೆಗಳನ್ನು ಅವರು ಒಪ್ಪುತ್ತಿರಲಿಲ್ಲ. ಹಾಗಾಗಿ ಅವರು ಒಪ್ಪಿಕೊಂಡದ್ದನ್ನು ಅನುಸರಿಸಿದರು ಮತ್ತು ಅನುಸರಿಸಿದ್ದನ್ನು ವಚನಗಳ ರೂಪದಲ್ಲಿ ಆಡಿ ತೋರಿಸಿದರು. ಇದಕ್ಕಾಗಿಯೇ ಅದು ನಡೆ ನುಡಿಗಳೊಂದಾದ ಸಮಾಜವಾಗಿತ್ತು.

ಈ ಶರಣರು, ನಮ್ಮನ್ನು ಸದಾ ಕಾಡುತ್ತಿರುವ ಈ ಬ್ರಹ್ಮಾಂಡ ಅಥವಾ ವಿಶ್ವ ಮತ್ತದರ ಉಗಮದ ಬಗೆಗೆ ಯಾವ ನಿಲುವನ್ನು ತಳೆದಿದ್ದರು ಎನ್ನುವುದನ್ನು ಅರಿಯಲು ವಚನಗಳನ್ನು ಅಭ್ಯಸಿಸಿದಾಗ ತಿಳಿದುಬರುವ ಅಂಶಗಳು ದಿಗ್ಭ್ರಮೆಯನ್ನುಂಟು ಮಾಡುತ್ತವೆ. ಮೊದಲಿಗೆ ಅಲ್ಲಮ ಪ್ರಭುಗಳ ಈ ವಚನವನ್ನು ಗಮನಿಸೋಣ––

ಆದಿ ಸ್ವಯಂಭುವಿಲ್ಲದ ಮುನ್ನ, ಸಂಗನಿಸ್ಸಂಗವಿಲ್ಲದ ಮುನ್ನ,
ನಕ್ಷತ್ರಗ್ರಹಂಗಳಿಲ್ಲದ ಮುನ್ನ, ಯೋಗ ಕರಣಂಗಳಿಲ್ಲದ ಮುನ್ನ,
ಖೇಚರ ಭೂಚರರಿಲ್ಲದ ಮುನ್ನ, ಆರಾರೂ ಇಲ್ಲದ ಮುನ್ನ,
ಆಕಾಶ ಮಾರುತರಿಲ್ಲದ ಮುನ್ನ, ಅಂಬುಧಿಕಮಠರಿಲ್ಲದ ಮುನ್ನ–
ಹರಿಬ್ರಹ್ಮಾದಿಗಳಾರ ನಿಲವಿಲ್ಲದ ಮುನ್ನ
ಹಿಮಕರದಿನಕರ ಸುಳುಹಿಲ್ಲದ ಮುನ್ನ–
ಹಿಂದಿಲ್ಲ ಮುಂದಿಲ್ಲ ಒಂದೂ ಇಲ್ಲದ ಮುನ್ನ,
ಗುಹೇಶ್ವರನಿರ್ದ ತನ್ನ ತಾನರಿಯದಂತೆ.

ನಂ. 302/25, ಜೇನುಕಲ್ ಪ್ಯಾರಡೈಸ್, ಪೈಪ್‌ಲೈನ್ ರಸ್ತೆ, ಕರ್ನಾಟಕ ಲೇಔಟ್,
1ನೇ ಹಂತ, ಬೆಂಗಳೂರು – 560 086 94810 35983



ಈ ವಚನದಲ್ಲಿ ಅಲ್ಲಮ ಪ್ರಭುಗಳು ವಿಶ್ವದ ಉಗಮವನ್ನು ಕುರಿತು ಏನನ್ನು ಹೇಳುತ್ತಾರೆ ಎಂದು ಪರಾಮರ್ಶಿಸುವ ಮೊದಲು ಈ ವಿಷಯದ ಬಗ್ಗೆ ವಿಜ್ಞಾನ ಏನು ಹೇಳುತ್ತದೆ ಎಂದು ತಿಳಿದುಕೊಳ್ಳೋಣ.

ವಿಶ್ವದ ಉಗಮದ ಬಗ್ಗೆ ವಿಜ್ಞಾನದ ಇಂದಿನ ಎಲ್ಲ ಸಿದ್ಧಾಂತಗಳ ಮೂಲ ೧೯೨೦ರಲ್ಲಿ ಎಡ್ವಿನ್ ಹಬಲ್ ಪ್ರತಿಪಾದಿಸಿದ ವಾದ. ಅವನ ಪ್ರಕಾರ ಈ ವಿಶ್ವದ ಸೃಷ್ಟಿ ಕಾರ್ಯ ಸುಮಾರು ೧೨ರಿಂದ ೨೦ ಬಿಲಿಯನ್ (೧,೨೦೦ ದಿಂದ ೨೦೦೦ ಕೋಟಿ) ವರ್ಷಗಳ ಹಿಂದೆ ಆಗಿತ್ತು. ಆದರೆ ಇತ್ತೀಚಿನ ಸಂಶೋಧನೆಗಳ ಪ್ರಕಾರ, ವಿಶ್ವದ ಉಗಮ ೧೩.೭೫ ಕೋಟಿ ವರ್ಷಗಳ ಹಿಂದೆ ಆಗಿದೆ ಎನ್ನುವುದಾಗಿದೆ. ಹಬಲ್‌ನ ವಾದಕ್ಕಿಂತ ೦.೧೧%ರಷ್ಟು ಮಾತ್ರ ಹೆಚ್ಚು ಅಷ್ಟೇ. ಹಾಗಿದ್ದಲ್ಲಿ ಈ ನಮ್ಮ ವಿಶ್ವದ ವಯಸ್ಸು ಸುಮಾರು ೧.೩೭೫ಕೋಟಿ ವರ್ಷಗಳು ಎಂದು ಹೇಳಬಹುದು. ಅದಕ್ಕೂ ಮೊದಲು ಏನೂ ಇರಲಿಲ್ಲ. ಆಗ ಇದ್ದಕ್ಕಿದ್ದಂತೆ ಚಿಕ್ಕದೊಂದು ಕಣ ಹುಟ್ಟಿಕೊಂಡಿತು. ಆ ಚಿಕ್ಕ ಕಣ ಎಲ್ಲಿಂದ ಬಂತು? ಹೇಗೆ ಬಂತು? ಎನ್ನುವುದು ಯಾರಿಗೂ ಗೊತ್ತಿಲ್ಲ. ಇದನ್ನು ಆದಿಕಣ ಅಥವಾ ಮೂಲಕಣ ಎಂದು ಕರೆಯುತ್ತಾರೆ. ವಿಶ್ವದ ಸೃಷ್ಟಿ ಕ್ರಿಯೆ ಪ್ರಾರಂಭವಾದ ಸೆಕೆಂಡಿನ ಅತ್ಯಂತ ಚಿಕ್ಕಭೇಧಾಂಶದ ಸಮಯದಲ್ಲಿ ಇದು ಕಾಣಿಸಿಕೊಂಡಿತು. ಇದರೊಂದಿಗೆ ಸಮಯದ ಗಣನೆಯೂ ಪ್ರಾರಂಭವಾಯಿತು. ಇದನ್ನು ಹಬಲ್ ಸ್ಥಿರ ಸಂಖ್ಯೆ ಎಂದು ಕರೆಯುತ್ತಾರೆ. ಇದಕ್ಕೂ ಮುಂಚೆ ಆಕಾಶವಾಗಲೀ ಸಮಯವಾಗಲೀ ಇರಲಿಲ್ಲ. ಇಂದಿನ ನಮ್ಮ ಅಥವಾ ವಿಶ್ವಕ್ಕೆ ಈ ಮೂಲ ಕಣ ಕಾರಣ ಇದನ್ನು "ಫೋಟಾನ್" ಎಂದು ಕರೆಯುತ್ತಾರೆ.

ಇಲ್ಲಿ ನಾವು ಮತ್ತೆ ಅಲ್ಲಮ ಪ್ರಭುಗಳ ವಚನದತ್ತ ಗಮನಹರಿಸೋಣ. "ಆದಿ ಸ್ವಯಂಭುವಿಲ್ಲದ ಮುನ್ನ," ಎನ್ನುವಲ್ಲಿ ಅಲ್ಲಮ ಪ್ರಭುಗಳು, ಆದಿ ಎನ್ನುವುದೇ ಇಲ್ಲದ ಮುನ್ನ ಎನ್ನುವಾಗ, ಯಾವುದೇ ಆರಂಭ ಅಥವಾ ಸಮಯದ ಗಣನೆಯೇ ಇಲ್ಲದಿದ್ದಾಗ ಎನ್ನುತ್ತಾರೆ. "ಸಂಗ ನಿಸ್ಸಂಗವಿಲ್ಲದ ಮುನ್ನ" ಅಂದರೆ ಜೊತೆಯಾಗಿ ಅಥವಾ ಜೊತೆಯಿಲ್ಲದಾಗಿ ಎನ್ನಲು ಏನೂ ಇರದಿದ್ದಾಗ ಅಂದರೆ ಅವಕಾಶ ಅಥವಾ ಸ್ಪೇಸ್ ಎನ್ನುವುದು ಇಲ್ಲದಿದ್ದಾಗ ಎನ್ನುತ್ತಾರೆ.

ಮತ್ತೆ ವಿಜ್ಞಾನದ ವಿವರಣೆಗೆ ಬರುವುದಾದರೆ, ಆ ಮೂಲ ಕಣ ಫೋಟಾನ್ ಎಲ್ಲವನ್ನು ತನ್ನೊಳಗಿರಿಸಿಕೊಂಡು, ಅತ್ಯಧಿಕ ಶಾಖವನ್ನು ಹೊಂದಿ ಗಾಳಿ ತುಂಬಿದ ಬಲೂನಿನಂತೆ ಹಿಗ್ಗಲು ಪ್ರಾರಂಭಿಸಿತು. ಪ್ಲಾಸ್ಮಾ ಸ್ಥಿತಿಯಲ್ಲಿದ್ದ ಆ ಕಣ ಹಿಗ್ಗುತ್ತಾ ಹಿಗ್ಗುತ್ತಾ ಇನ್ನೂ ಹಿಗ್ಗಲು ಸಾಧ್ಯವಿಲ್ಲ ಎಂಬಂತಾದ ಒಮ್ಮೆಲೇ ಸ್ಫೋಟಗೊಂಡಿತು. ಇದನ್ನೇ "ಮಹಾ ಸ್ಫೋಟ" "ಬಿಗ್ ಬ್ಯಾಂಗ್" ಎಂದು ಕರೆದರು ಆಗ ಅದರಲ್ಲಿದ್ದ ದ್ರವ್ಯವೆಲ್ಲ ಚದುರಿ ಹೋಯಿತು. ಚದುರಿ ಹೋದ ದ್ರವ್ಯವೆಲ್ಲ ಮರುಸಾಂದ್ರೀಕರಣಗೊಂಡು ಗ್ರಹ ನಕ್ಷತ್ರಗಳಾದವು. ವಿಶ್ವವು ವಿಸ್ತಾರವಾಗುತ್ತಾ ತಣ್ಣಗಾಗುತ್ತ ಹೋಯಿತು. (ಸೂರ್ಯನ ಗರ್ಭವಿನ್ನೂ ಪ್ಲಾಸ್ಮಾ ಸ್ಥಿತಿಯಲ್ಲೇ ಇದೆ) ಹೀಗೆ ಹಿಗ್ಗಲು ಪ್ರಾರಂಭಿಸಿದ ವಿಶ್ವವಿನ್ನೂ ಹಿಗ್ಗುತ್ತಲೇ ಇದೆ. ಈ

ಪ್ರಕ್ರಿಯೆಯಲ್ಲಿ ನಕ್ಷತ್ರಗಳು ಗ್ರಹಗಳು ಅವುಗಳನ್ನೊಳಗೊಂಡ ನಿಹಾರಿಕೆಗಳು ದೂರ ದೂರಕ್ಕೆ ಚದುರುತ್ತಲೇ ಇವೆ. ಅಂತಹದೊಂದು ನಿಹಾರಿಕೆ ಆಕಾಶ ಗಂಗೆಯಲ್ಲಿ ನಮ್ಮ ಸೌರವ್ಯೂಹವಿದೆ ಅದರಲ್ಲಿರುವ ಭೂಮಿಯಲ್ಲಿ ನಾವಿದ್ದೇವೆ. ಇದು ವಿಶ್ವದ ಉಗಮದ ಬಗ್ಗೆ ವಿಜ್ಞಾನದ ಅತ್ಯಂತ ಸಂಕ್ಷಿಪ್ತ ವಿವರಣೆ. ಇವೆಲ್ಲವೂ ನಮಗೆ ತಿಳಿದದ್ದು ೧೭ನೆಯ ಶತಮಾನದಿಂದೀಚೆಗೆ.

ಈಗ ಮತ್ತೆ ೧೨ನೆಯ ಶತಮಾನದ ವಚನಕ್ಕೆ ಬರೋಣ, ನಕ್ಷತ್ರ, ಗ್ರಹಗಳ್ಯಾವುವೂ ಇಲ್ಲದಿದ್ದಾಗ, ಈ ಹಿಗ್ಗುವಿಕೆ ಮತ್ತು ಸಾಂದ್ರೀಕರಣ (ಯೋಗಕರಣ)ಗಳು ಆಗುವ ಮುನ್ನ, ಆಕಾಶದಲ್ಲಿ ಚಲಿಸುವ ಜೀವಿಗಳಾಗಲೀ ಭೂಮಿಯ ಮೇಲಿನ ಜೀವಿಗಳಾಗಲೀ ಯಾವುವೂ ಇಲ್ಲದಿದ್ದಾಗ, ಆಕಾಶವಾಗಲೀ ಚಲಿಸುವ ಮಾರುತವಾಗಲೀ ಇಲ್ಲದಿದ್ದಾಗ, ಸಾಗರವಾಗಲೀ ಭುವಿಯ ಕವಚವಾಗಲೀ ಉಗಮಗೊಳ್ಳುವ ಮುನ್ನ ಹರಿ ಬ್ರಹ್ಮರ ಕಲ್ಪನೆಯೂ ಇರದಿದ್ದಾಗ, ಚಂದ್ರ ಸೂರ್ಯರ ಸುಳಿವೂ ಇರದಿದ್ದಾಗ, ಹಿಂದೆ ಮುಂದೆ ಎನ್ನುವುದೊಂದೂ ಇಲ್ಲದಿದ್ದಾಗ, "ಗುಹೇಶ್ವರನಿದ್ದ ತನ್ನ ತಾನರಿಯದಂತೆ" ಎನ್ನುವಲ್ಲಿ ಆ ಮೂಲ ಕಣ ಫೋಟಾನ್‌ನನ್ನೇ ಅಲ್ಲಮ ಪ್ರಭುಗಳು ಗುಹೇಶ್ವರ ಎಂದಿರಬಹುದೇ? ಎನ್ನುವ ಸಂಶಯ ಮೂಡುತ್ತದೆ.

ಈ ವಿವರಣೆಗೆ ಪೂರಕವಾಗಿ ಅಲ್ಲಮ ಪ್ರಭುಗಳು ತಮ್ಮ ಇನ್ನೊಂದು ವಚನದಲ್ಲಿ,

ಏನೂ ಏನೂ ಇಲ್ಲದ ಬಯಲೊಳಗೊಂದು
ಬಗೆಗೊಳಗಾದ ಬಣ್ಣ ತಲೆದೋರಿತ್ತು.
ಆ ಬಣ್ಣವು ಆ ಬಯಲ ಶೃಂಗರಿಸಲು,
ಬಯಲು ಸ್ವರೂಪಗೊಂಡಿತ್ತು.
ಅಂತಪ್ಪ ಸ್ವರೂಪಿನ ಬೆಡಗು ತಾನೆ,
ನಮ್ಮ ಗುಹೇಶ್ವರಲಿಂಗದ ಪ್ರಥಮ ಬಿತ್ತಿ

ಈ ವಚನದಲ್ಲಿ ಅಲ್ಲಮ ಪ್ರಭುಗಳು ಏನೂ ಇಲ್ಲದ ಬಯಲಿನಲ್ಲಿ ಹುಟ್ಟಿಕೊಂಡ ಬಣ್ಣವೊಂದು ಬಯಲನ್ನು ಶೃಂಗರಿಸಿತ್ತು ಎನ್ನುವಾಗ, ಮೂಲಕಣ ವಿಕಾಸವಾಗಿ ಬಯಲನ್ನು ವ್ಯಾಪಿಸಿದ ಬಗೆಯನ್ನು ತಿಳಿಸಿದರೆ, ಆ ಆದಿಕಣವೇ ಸೃಷ್ಟಿಯ ಮೂಲ ಕಣವಾಗಿ ವಿಕಾಸಗೊಳ್ಳುತ್ತ ಹೋಗುವುದನ್ನು ಕಂಡು ಬೆರಗಾಗಿದ್ದಾರೆ ಮಾತ್ರವಲ್ಲ, ಅದುವೇ ಗುಹೇಶ್ವರನ ಪ್ರಥಮ ಹೊಳಹು ಎಂದು ಸಹ ಹೇಳುತ್ತಾರೆ.

ಆದಿ ಅನಾದಿ ಒಂದಾದಂದು,
ಚಂದ್ರಸೂರ್ಯರೊಂದಾದಂದು,
ಧರೆ ಆಕಾಶ ಒಂದಾದಂದು; ಗುಹೇಶ್ವರಲಿಂಗನು ನಿರಾಳನು

ಇಲ್ಲಿ ಅಲ್ಲಮ ಪ್ರಭುಗಳು ಚಂದ್ರ, ಸೂರ್ಯ, ಭೂಮಿ ಆಕಾಶ ಎಲ್ಲವೂ ಒಂದೇ ಆಗಿದ್ದಾಗ, ಗುಹೇಶ್ವರ ನಿರಾಳನಾಗಿದ್ದ ಎನ್ನುವಲ್ಲಿ, ಏನೇನೂ ಇಲ್ಲದಿದ್ದಾಗ, ಎಲ್ಲವೂ ನಿರಾಳವಾಗಿತ್ತು ಎಂದರೆ ಪ್ರಶಾಂತವಾಗಿತ್ತು ಎನ್ನುತ್ತಾರೆ.

ಚೆನ್ನಬಸವಣ್ಣನವರು ಈ ಸೃಷ್ಟಿಯು ಯಾವಾಗ ಉದ್ಭವವಾಯಿತು ಎಂಬುದನ್ನು





ವಿವರಿಸುತ್ತ–

ಮಹಾಕಾಲದಲ್ಲಿ ನಿಮ್ಮಿಂದ ನೀವೆ
ಸ್ವಯಂಭುವಾಗಿರ್ದಿರಯ್ಯಾ ಒಂದನಂತಕಾಲ
ಮಹವು ಮಹಾನಂದದಲುಕ್ಕಾಡಿ,
ಮತ್ತಲ್ಲಿಯೆ ಲೀಯವಾಗಿರ್ದುದು
ಒಂದನಂತಕೋಟಿ ವರುಷ
ಕೂಡಲಚೆನ್ನಸಂಗಮದೇವ ವಿಪರೀತಚಾರಿತ್ರ

ಈ ಸೃಷ್ಟಿ ಅಥವಾ ವಿಶ್ವ ಒಂದನಂತ ಕಾಲ ನಿಮ್ಮಿಂದ ನೀವೇ ಸ್ವಯಂಭುವಾಗಿದ್ದಿರಿ ಎನ್ನುವಲ್ಲಿ ವಿಶ್ವದ ಉಗಮಕ್ಕೆ ಮುನ್ನ ಎಲ್ಲವೂ ತಾನೇ ತಾನಾಗಿತ್ತು ಮತ್ತು ಅದೆಲ್ಲವೂ ಆ ಮೂಲ ಕಣದಲ್ಲಿ ಹುದುಗಿದಂತೆ ಇತ್ತು. ಅನಂತರ ಆ ಮೂಲ ಕಣ ಮಹಾ ಆನಂದಲ್ಲಿ ಉಕ್ಕಾಡಿ ಅಂದರೆ ಹಿಗ್ಗಿ ಸ್ಫೋಟಿಸಿ ಅನಂತ ಕೋಟಿ ವರ್ಷಗಳು ಮತ್ತೆಲ್ಲಿಯೋ ಲೀನವಾಗಿಬಿಟ್ಟಿರಿ ಎನ್ನುವಲ್ಲಿ ಮರುಸಾಂದ್ರೀಕರಣಗೊಳ್ಳುತ್ತಾ ಅನಂತಕೋಟಿ ವರ್ಷಗಳನ್ನು ಕಳೆದಿರಿ ಎನ್ನುತ್ತಾರೆ. ಈ ಅನಂತ ಕೋಟಿಯ ಕಲ್ಪನೆಯೇ ಅಚ್ಚರಿಯಾದರೆ, ಉಕ್ಕುವ ಅಥವಾ ಸ್ಫೋಟಿಸುವ ಮತ್ತು ಲೀನವಾಗುವ ವಿಷಯಗಳು ಮತ್ತೂ ಅಚ್ಚರಿಯನ್ನುಂಟು ಮಾಡುತ್ತವೆ.

ಈ ವಿಶ್ವದ ಉಗಮದ ಬಗೆಯನ್ನು ಅರಿಯಲು ಇತ್ತೀಚೆಗೆ ನಡೆದ ಲಾರ್ಜ ಹೈಡ್ರಾನ್ ಕೊಲೈಡರ್ ಪ್ರಯೋಗದಲ್ಲಿ ಮೂಲಕಣವನ್ನು ಕೆಲವರು "ದೇವಕಣ" ಎಂದು ಕರೆದದ್ದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಆ ಪ್ರಯೋಗ ಸಂಪೂರ್ಣವಾದ ಮಾಹಿತಿಯನ್ನು ಒದಗಿಸದಿದ್ದರೂ ಮೂಲಕಣ ಸಿದ್ಧಾಂತವನ್ನು ಪುಷ್ಟೀಕರಿಸಿತು. ಇವೆಲ್ಲವನ್ನೂ ನೋಡಿದಾಗ ಶರಣರ ತಾರ್ಕಿಕ ಜ್ಞಾನದ ಆಳದ ಅರಿವು ನಮಗಾಗುತ್ತದೆ.

□

ಸ್ಥಾವರಭಕ್ತಂಗೆ ಸೀಮೆಯಲ್ಲದೆ
ಘನಲಿಂಗಜಂಗಮಕ್ಕೆ ಸೀಮೆಯೆಲ್ಲಿಯದು
ಅಂಬುಧಿಗೆ ಸೀಮೆಯಲ್ಲದೆ
ಹರಿವ ನದಿಗೆ ಸೀಮೆಯೆಲ್ಲಿಯದು
ಭಕ್ತಂಗೆ ಸೀಮೆಯಲ್ಲದೆ
ಜಂಗಮಕ್ಕೆ ಸೀಮೆಯುಂಟೆ
ಕೂಡಲಸಂಗಮದೇವಾ



ಶ್ರೀ ನರೇಂದ್ರ ಮೋದಿ
ಸನ್ಮಾನ್ಯ ಪ್ರಧಾನಮಂತ್ರಿಗಳು





# ನವಭಾರತಕ್ಕಾಗಿ ನವಕರ್ನಾಟಕ



ಶ್ರೀ ಬಸವರಾಜ ಎಸ್. ಬೊಮ್ಮಾಯಿ
ಸನ್ಮಾನ್ಯ ಮುಖ್ಯಮಂತ್ರಿಗಳು

## ಸಾಮಾಜಿಕ ಭದ್ರತೆ

- 'ಸಂಧ್ಯಾ ಸುರಕ್ಷಾ' ವೃದ್ಧಾಪ್ಯ ವೇತನ ರೂ.1000/- ರಿಂದ ರೂ.1200/- ಕ್ಕೆ ಏರಿಕೆ. ಯೋಜನೆಯ ಫಲಾನುಭವಿಗಳು 35.98 ಲಕ್ಷಗಳು.
- ವಿಧವಾ ವೇತನ ರೂ. ರೂ. 600/- ರಿಂದ ರೂ. 800/- ಕ್ಕೆ ಏರಿಕೆ. 17.25 ಲಕ್ಷ ಫಲಾನುಭವಿಗಳು.
- ದಿವ್ಯಾಂಗರ ಮಾಸಿಕ ವೇತನ ರೂ. 600/- ರಿಂದ ರೂ. 800/-ಕ್ಕೆ ಏರಿಕೆ. ಯೋಜನೆಯ ಫಲಾನುಭವಿಗಳು 3.66 ಲಕ್ಷಗಳು.



"ನಮ್ಮ ವೈವಿಧ್ಯಮಯ ಸಂಸ್ಕೃತಿಯ ಶ್ರೇಷ್ಠ ಪರಂಪರೆಯನ್ನು ಗೌರವಿಸುವುದು ಮತ್ತು ರಕ್ಷಿಸುವುದು"
- ಪ್ರತಿಯೊಬ್ಬ ಭಾರತೀಯನ ಸಂವಿಧಾನಬದ್ಧ ಮೂಲಭೂತ ಕರ್ತವ್ಯ

ಕರ್ನಾಟಕ ವಾರ್ತೆ
ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ







ಶ್ರೀ ನರೇಂದ್ರ ಮೋದಿ
ಸನ್ಮಾನ್ಯ ಪ್ರಧಾನಮಂತ್ರಿಗಳು





# ನವಭಾರತಕ್ಕಾಗಿ ನವಕರ್ನಾಟಕ



ಶ್ರೀ ಬಸವರಾಜ ಎಸ್. ಬೊಮ್ಮಾಯಿ
ಸನ್ಮಾನ್ಯ ಮುಖ್ಯಮಂತ್ರಿಗಳು

## ರಾಷ್ಟ್ರೀಯ ಶಿಕ್ಷಣ ನೀತಿ -2020

- ರಾಷ್ಟ್ರೀಯ ಶಿಕ್ಷಣ ನೀತಿಯನ್ನು (NEP) ಜಾರಿಗೆ ತಂದ ಮೊದಲ ರಾಜ್ಯ ಎಂಬ ಕೀರ್ತಿಗೆ ಭಾಜನವಾದ ಕರ್ನಾಟಕ
- ರಾಷ್ಟ್ರೀಯ ಶಿಕ್ಷಣ ನೀತಿ–2020 ಅಡಿ ಕರ್ನಾಟಕದಲ್ಲಿ ಕನ್ನಡದಲ್ಲಿ ಇಂಜಿನಿಯರಿಂಗ್ ಪಠ್ಯಕ್ರಮ
- ಇಂಜಿನಿಯರಿಂಗ್ ಕಾಲೇಜುಗಳಲ್ಲಿ ನಾಲ್ಕು ವರ್ಷ ಬಿ.ಎಸ್.ಸಿ (ಫಾರ್ಮಾ) ಕೋರ್ಸ್‌ಗೆ ಚಾಲನೆ





"ನಮ್ಮ ವೈವಿಧ್ಯಮಯ ಸಂಸ್ಕೃತಿಯ ಶ್ರೇಷ್ಠ ಪರಂಪರೆಯನ್ನು ಗೌರವಿಸುವುದು ಮತ್ತು ರಕ್ಷಿಸುವುದು"
- ಪ್ರತಿಯೊಬ್ಬ ಭಾರತೀಯನ ಸಂವಿಧಾನಬದ್ಧ ಮೂಲಭೂತ ಕರ್ತವ್ಯ

ಕರ್ನಾಟಕ ವಾರ್ತೆ
ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ

## ಕ್ಷೇತ್ರ ವಾರ್ತೆಗಳು




ಬಬಲೇಶ್ವರ ತಾಲೂಕು ಸಾರವಾಡ : ಲಿಂ. ಪಿ.ಕೆ. ಗುಡದಿನ್ನಿ ದತ್ತಿ, ದಿನಾಂಕ: ೧.೧೨.೨೦೨೧
ಆರ್. ಬಿ. ಗುಡದಿನ್ನಿ, ಮಲ್ಲಣ್ಣ ಕೋಟಿ, ಪೂ. ರೇಣುಕಸ್ವಾಮಿ ಹಿರೇಮಠ, ಹಾಸಿಂಪೀರ ವಾಲಿಕಾರ
ಜಂಬುನಾಥ ಕಂಚ್ಯಾಣಿ, ಎಲ್.ಪಿ. ಬಿರಾದಾರ, ಎನ್.ಪಿ. ಲಮಾಣಿ




ಬೀದರ್: ಲಿಂ. ಸುಶೀಲ್ ನಾಗಯ್ಯ ಸ್ವಾಮಿ ದತ್ತಿ, ದಿನಾಂಕ ೬.೦೧.೨೦೨೨
ಚಿತ್ರದಲ್ಲಿ: ಬಸವಂತ ರಾಯ್ ಜಿದ್ದೆ , ಜಯರಾಜ್ ದಾಭಶಟ್ಟೆ, ಸೂರ್ಯಕಾಂತ ಪಾಟೀಲ
ಸಿದ್ರಾಮಪ್ಪ ಅಣದೂರೆ, ವೀರಶೆಟ್ಟಿ ಬಾವುಗೆ, ಮಲ್ಲಿಕಾರ್ಜುನ ಸ್ವಾಮಿ, ಶಂಭುಲಿಂಗ ಕಾಮಣ್ಣ
ಸಂತೋಷ ಹಡಪದ, ವೀರಣ್ಣ ಕುಂಬಾರ



ತುಮಕೂರು: ಕದಳಿ ಮಹಿಳಾ ವೇದಿಕೆಯ ಮಾಸಿಕ ಸಭೆಯಲ್ಲಿ ಶರಣ ಮಾದಾರ ಚೆನ್ನಯ್ಯ ಹಾಗೂ
ಶರಣೆ ದಾನಮ್ಮ ಜಯಂತಿ ಆಚರಣೆ. ದಿನಾಂಕ: ೧೬.೧೨.೨೦೨೧, ಸನ್ಮಾನ: ಕೆ.ಎಸ್. ಸಿದ್ಧಲಿಂಗಪ್ಪ,
ಚಿತ್ರದಲ್ಲಿ: ನಾಗರತ್ನ ಚಂದ್ರಪ್ಪ, ಗಿರಿಜಾ ವಿರೂಪಾಕ್ಷ, ಸುಮಾ ಪ್ರಸನ್ನ, ಶಿವಲಿಂಗಮ್ಮ, ಲೋಕೇಶ್ವರಿ ಪ್ರಭು,
ಮಂಗಳಾ ಮಹೇಶ್, ಜಯಂತಿ ಚಿತ್ರರಂಜನ್, ವಿಮಲಾ ಶಿವಸ್ವಾಮಿ, ಜಯರತ್ನ ಉದಯ್, ರಾಜಮ್ಮ,
ಗೀತಾಮಣಿ, ಅಂಬಿಕಾ ಮಹೇಶ್

Magazine Registration No. RNI 68294/97
"REGISTERED" Postal Registration No. RNP/KA/BGS/167/2021-2023
Licensed to post without Pre Payment, License No:- PMG/BG/WPP/119/2021-2023
Posted at Registered News Paper Mailing Center, Bangalore P.S.O. Mysore Road-560 026 on 5th of every Month
MAHAAMANE Monthly Magazine Date of Publication 1 February 2022
Total Pages 68 (Include Cover Pages)

## ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು




ಬಾಗಲಕೋಟೆ : ಲಿಂ. ಶಂಕರಗೌಡ ಭೀಮನಗೌಡ ಪಾಟೀಲ ದತ್ತಿ, ದಿನಾಂಕ: ೧.೧.೨೦೨೨
ಚಿತ್ರದಲ್ಲಿ: ಶಿವಾನಂದ ಶ್ಲುಕೇರಿ, ಪ್ರೊ.ಬಿ.ಆರ್. ಪೋಲೀಸಪಾಟೀಲ, ಶಾರದಾ ಮೇಟಿ
ಡಾ.ಜಿ.ಜಿ. ಹಿರೇಮಠ, ಉಮಾದೇವಿ ಪಟ್ಟಣಶೆಟ್ಟಿ, ಪ್ರಿಯದರ್ಶಿನಿ ಉಗಲವಾಟ, ಜಯಶ್ರೀ ಆಲೂರ




ಶಿಕಾರಿಪುರ : ಲಿಂ.ಬಿ.ಸಿ. ನಾಗರತ್ನಮ್ಮ ದತ್ತಿ ಮತ್ತು ಲಿಂ. ಸದಾಶಿವಪ್ಪ ದತ್ತಿ
ದಿನಾಂಕ: ೦೬.೦೧.೨೦೨೨. ಚಿತ್ರದಲ್ಲಿ: ಎಸ್.ಇ. ಗಾಯತ್ರಿ ಪಾಟೀಲ್, ಪ್ರೊ. ವಿಜಯಾದೇವಿ,
ಆರ್.ಎಸ್. ಸ್ವಾಮಿ, ಡಾ. ಹೆಚ್. ಚಿನ್ನಪ್ಪ, ಕೆ.ಜಿ. ನರಸಿಂಹರಾಜ್, ಎಸ್.ಎಚ್. ಪಾಟೀಲ್, ಜಯಮ್ಮ
ಕುಬಸದ್, ವಿಶಾಲಾಕ್ಷಿ ಮಂಜುನಾಥ, ಗಾಯತ್ರಿ ರಾಮಚಂದ್ರ, ಯಶೋದಾ ನಟರಾಜ್

ಶ್ರೀ ಚಂದ್ರಶೇಖರ ಕಗ್ಗಲ್ಲಗೌಡ್ರು
ನಿವೃತ್ತ ಕನ್ನಡ ಭಾಷಾ ಶಿಕ್ಷಕರು ಮತ್ತು ರಾಜ್ಯ
ಸಂಪನ್ಮೂಲ ವ್ಯಕ್ತಿಗಳು (ಕನ್ನಡ)
ಮೈಸೂರು. 9448958498

Published by: Go.Ru. Channabasappa, Akhila Bharatha Sharana Sahitya Parishat (Regd.),
Jagadguru Sri Shivarathrishwara Circle, 1st Main, 8th Block, Jayanagar, Bengaluru - 560 070
Printed at: Sathyasri Printers Pvt. Ltd., No. 16/1, 3rd Cross, 2nd Main Road, Kasturiba Nagar, Bengaluru 26
Editor : Dr. M.S. Ashadevi